# ಿದ್ಧಗಂಗಾ



ಂಗಳೂರಿನ ಬಿ. ವಿ. ಕೆ. ಅಯ್ಯಂಗಾರ್ ರಸ್ತೆಯಲ್ಲಿರುವ ಶ್ರೀ ಕ್ಷೇತ್ರದ 'ಸಿದ್ಧಗಂಗಾ ಭವನ' ದಲ್ಲಿ ಶೇಖರ್ ಅಂಡ್
ಂಪನಿ ಕಛೇರಿಯನ್ನು ಇತ್ತೀಚೆಗೆ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಕಂಪನಿಯ
ಮಾಲೀಕರಾದ ಶ್ರೀ ಎ. ಚಂದ್ರಶೇಖರ್ ಮತ್ತು ಶ್ರೀ ಹೆಚ್. ತಿಮ್ಮಯ್ಯ ಇವರುಗಳನ್ನು ಕಾಣಬಹುದು.

ನವೆಂಬರ್ — 1980

# ಸ್ಟೇಟ್ ಬ್ಯಾಂಕ್ ಆಫ್ ಮೈಸೂರು

**[ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸಹ ಸಂಸ್ಥೆ ]**

ಪ್ರಗತಿಯ ಸಹಜ ಸೂತ್ರವೆಂದರೆ ಶ್ರಮದ ದುಡಿಮೆ. ನಿಮ್ಮ ಶ್ರಮದ ಫಲ ನೀವು ಗಳಿಸಿದ ಹಣ ನಿಮಗೆ ಸುಖಕರವಾದ ಜೀವನ ಕೊಡಲು ನಾವು ನಿಮ್ಮ ಉಳಿತಾಯವನ್ನು ನಿಮ್ಮ ಇನ್ನೊಬ್ಬ ದುಡಿಮೆಗಾರನಾಗಿ ಮಾಡುವೆವು ;

**ನಮ್ಮ ಆಕರ್ಷಕ ಯೋಜನೆಗಳ ಹೆಚ್ಚಿನ ವಿವರಗಳಿಗೆ**
**ನಿಮಗೆ ಸಮೀಪದ ನಮ್ಮ ಯಾವುದೇ ಶಾಖೆಗೆ ಭೇಟಿ ಕೊಡಿರಿ.**

ಪ್ರಧಾನ ಕಛೇರಿ :
**ಬೆಂಗಳೂರು–560009**

**ಎಂ. ಬಿ. ದೇಶಮುಖ್**
ಮ್ಯಾನೇಜಿಂಗ್ ಡೈರೆಕ್ಟರ್



# ವೀರಶೈವ ಕೋ-ಆಪರೇಟಿವ್ ಬ್ಯಾಂಕ್ ಲಿ.,

## ಅಕ್ಕಿಪೇಟೆ : : ಬೆಂಗಳೂರು-53.

| | | ಲಕ್ಷಗಳಲ್ಲಿ |
|---|---|---|
| ಪಾವತಿಯಾದ ಬಂಡವಾಳ | .... | ರೂ. 8–23 |
| ಆಪದ್ಧನಗಳು | .... | ರೂ. 8–79 |
| ಠೇವಣಿಗಳು | .... | ರೂ. 43–60 |
| ಸಾಲಗಳು | .... | ರೂ. 34–07 |
| ಹೂಡಿರುವ ಬಂಡವಾಳ | .... | ರೂ. 60–00 |

ಲಾಭಾಂಶ ಹಂಚಿಕೆ
ಶೇಕಡಾ 10 ರಂತೆ.

**ಎಂ. ಶಿವಪ್ಪ,**
ಅಧ್ಯಕ್ಷರು

ಬಿ. ಬಸವರಾಜು,
ಉಪಾಧ್ಯಕ್ಷರು

ಬಿ. ಎಂ. ಶ್ರೀಕಂಠಸ್ವಾಮಿ,
ಖಜಾಂಚಿಗಳು

ಬಿ. ಎಸ್. ಪರಮಶಿವಯ್ಯ,
ಕಾರ್ಯನಿರ್ವಾಹಕ ನಿರ್ದೇಶಕ

ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್,
ಕಮಿಟಿ ಆಡಿಟರು

ಡೈರೆಕ್ಟರುಗಳು

ಸರ್ವಶ್ರೀ : 1. ವೈ. ಟಿ. ಮಹದೇವಪ್ಪ 2. ಎಸ್. ಶ್ರೀಕಂಠಪ್ಪ 3. ಬಿ. ಟಿ. ಉಮೇಶ್
4 ಎಲ್. ಎಸ್. ರೇಣುಕ 5. ಕೆ. ರಾಚಯ್ಯ 6. ಎಸ್. ಆರ್. ಸಿದ್ದರಾಜು
7. ಬಿ. ಶಿವಕುಮಾರ್ 8. ಬಿ. ಎಸ್. ಬಾಲರಾಜ 9. ಜಿ. ಎಸ್. ರಾಜಶೇಖರ್ 10. ಎಲ್. ರಾಜಪ್ಪ.



# ಶ್ರೀವಾಣಿ

ಭರತಖಂಡ ಜಗತ್ತಿಗೆ ಕೊಟ್ಟಿರುವಂಥ ಕಾಣಿಕೆ ಯಾವಕಾಲಕ್ಕೂ ಸ್ಮರಿಸತಕ್ಕದ್ದಾಗಿದೆ. ಅದರ ಕೊಡುಗೆ ವಿಶ್ವಭ್ರಾತೃತ್ವ, ವಿಶ್ವಕಲ್ಯಾಣಕರವಾದ್ದುದು. ಭಾರತೀಯ ಸಂಸ್ಕೃತಿ ಎಂದೂ ಸಂಕುಚಿತ ಭಾವನೆಯುಳ್ಳದ್ದಾಗಲಿ, ವಿನಾಶಾತ್ಮಕವಾದುದಾಗಲಿ ಅಲ್ಲ. ಅಥವಾ ಎಲ್ಲವನ್ನೂ ತುಳಿದು ತಾನು ಮಾತ್ರ ಮೇಲೆ ಬರಬೇಕೆಂಬ ಭಾವನೆಯುಳ್ಳದ್ದೂ ಅಲ್ಲ. ಪರಂತು ಅದು ಹೆಚ್ಚು ವಿಧಾನಾತ್ಮಕವಾದದ್ದೂ ಭಾವನಾತ್ಮಕವಾದದ್ದೂ ಆಗಿದೆ. ಅದರ ಉದಾರಭಾವನೆ ವಿದೇಶದ ವಿಧರ್ಮೀಯರಿಗೂ ಎಡೆಕೊಟ್ಟಿತು. ಎಲ್ಲಮತಸಿದ್ಧಾಂತಗಳ ಸಮನ್ವಯವನ್ನೂ ಮೈಗೂಡಿಸಿಕೊಂಡಿತು. ಯಾವ ಬೈಬಲ್ ಧರ್ಮಗ್ರಂಥವಾಗಲಿ, ಕುರಾನಾಗಲಿ ಉದಯವಾಗುವುದಕ್ಕಿಂತ ಸಾವಿರಾರು ವರ್ಷಗಳ ಹಿಂದೆಯೇ ಸರ್ವಧರ್ಮ ಸಾರಸರ್ವಸ್ವವನ್ನು ನಮ್ಮ ಆರ್ಯವಾಣಿ ಸರ್ವಗ್ರಾಹ್ಯವಾಗಿ ಮೊಳಗಿತು.

ಶ್ರೂಯತಾಂ ಧರ್ಮ ಸರ್ವಸ್ವಂಯದುಕ್ತಂ ಗ್ರಂಥಕೋಟಿಭಿಃ
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ||

ಪರೋಪಕಾರವೇ ಪುಣ್ಯ. ಪರಪೀಡನೆಯೇ ಪಾಪ. ಇದೇ ಸರ್ವಧರ್ಮ ಸಾರಸಂಗ್ರಹ.

ಒಂದು ವಿಷಯವನ್ನು ನಾವಿಂದು ಗಂಭೀರವಾಗಿ ಆಲೋಚಿಸಬೇಕಾಗಿದೆ. ಅದು ದೇಶಪ್ರೇಮಿಗಳ ಮೇಲೆ ಅತ್ಯಂತ ಪರಿಣಾಮ ಬೀರಿದೆ. ಯಾವ ದುರದೃಷ್ಟವೋ ಏನೊ ನಮ್ಮ ಜನ ನಮ್ಮ ಸಂಸ್ಕೃತಿಯ ಬಗ್ಗೆ ಅನಾದರತೆ ಉದಾಸೀನತೆಯನ್ನು ತೋರಿಸುತ್ತಿದ್ದಾರೆ. ಅದು ನಿಜಕ್ಕೂ ಹಾನಿಪ್ರದ. ಭರತಖಂಡದಲ್ಲಿ ಇಂದು ಉಂಟಾಗಿರುವ ಅನಿಷ್ಟವಾತಾವರಣಕ್ಕೆ ಇಂದಿನರಾಷ್ಟ್ರನಾಯಕರು ನಮ್ಮ ಸಂಸ್ಕೃತಿ ಭೂಮಿಕೆಯ ವ್ಯವಹಾರವನ್ನು ಮರೆತಿರುವುದೇ ಮುಖ್ಯ ಕಾರಣವಾಗಿದೆ. ಅವರು ಅಧಿಕಾರದಾಹ, ಸ್ವಾರ್ಥಸಾಧನೆ, ಭೋಗಲಾಲಸೆಗಳಿಗೆ ಬಲಿಯಾಗಿ ದೇಶದ ಹಿತವನ್ನು ಕಡೆಗಣಿಸಿದ್ದಾರೆ. ಇದರಿಂದ ಇಂದು ಮಹಾನ್ ಅನರ್ಥ ಸಂಜನಿಸಿದೆ. ಆದ್ದರಿಂದ ಅದ್ಯಾಪಿ ನಮ್ಮ ಜನಾಂಗ ಮತ್ತು ನಾಯಕರು ಎಚ್ಚೆತ್ತು ವ್ಯವಹಾರದಲ್ಲಿ ನಮ್ಮ ಸಂಸ್ಕೃತಿಯನ್ನು ಅಳವಡಿಸಿಕೊಂಡಾಗ ಮಾತ್ರ ಜಗತ್ತು ನಮ್ಮಿಂದ ಯಾವುದನ್ನು ನಿರೀಕ್ಷಿಸುತ್ತಿದೆಯೋ ಅದನ್ನು ಕೊಡುವ ಸಾಮರ್ಥ್ಯವನ್ನು ಮರಳಿ ಪಡೆಯುತ್ತೇವೆ.

# 'ಸಿದ್ಧಗಂಗಾ'

ನವೆಂಬರ್ ೧೯೮೦

ಸಂಪುಟ–೧೩ ಸಂಚಿಕೆ–೧೧

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ॥ ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ಆಜೀವ ಸದಸ್ಯತ್ವ: **151-00** ರೂ
ವಾರ್ಷಿಕ ಚಂದಾ: **10-00** ರೂ

## ಈ ಸಂಚಿಕೆಯಲ್ಲಿ



### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣ ಕಥೆ, ಕವನ, ನಗೆಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"
"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ–572104 ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1980ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572104 ತುಮಕೂರು ಜಿಲ್ಲೆ.

# ನವನೀತ

ಆಚಾರಃ ಪರಮೋ ಧರ್ಮಃ ಶ್ರುತ್ಯುಕ್ತಃ ಸ್ಮಾರ್ತ ಏವಚ ।
ತಸ್ಮಾದಸ್ಮಿನ್ ಸದಾಯುಕ್ತಃ ನಿತ್ಯಂ ಸ್ಯಾದಾತ್ಮವಾನ್ನರಃ ॥

—ಮನುಸ್ಮೃತಿ

ವೇದಗಳಲ್ಲಿ ಸ್ಮೃತಿಗಳಲ್ಲಿ ಹೇಳಿರುವ ಸದಾಚಾರವು ಶ್ರೇಷ್ಠವಾದ ಧರ್ಮ. ಆದುದರಿಂದ ಮಾನವನು ಅವುಗಳನ್ನು ಸರ್ವದಾ ಕಾಪಾಡಿಕೊಂಡು ಆತ್ಮ ಜ್ಞಾನವನ್ನು ಪಡೆಯಬೇಕು.

  

ನಾಪತ್ಯಾನಿ ನ ವಿತ್ತಾನಿ ನ ಸೌಧಾನಿ ಭವಂತ್ಯಹೋ ।
ಮೃತ್ಯುನಾ ನೀಯಮಾನಸ್ಯ ಪುಣ್ಯ ಪಾಪೇ ಪರಂ ಪುರಃ ॥

—ವೈರಾಗ್ಯ ಶತಕ

ಮೃತ್ಯುವು ಬಂದು ಎಳೆದೊಯ್ಯುವಾಗ ಮಕ್ಕಳೂ ಇಲ್ಲ, ಹಣವೂ ಇಲ್ಲ, ಸೌಧಗಳೂ ಇಲ್ಲ, ಯಾವುದೂ ಜೊತೆಗೆ ಬರದು. ತನ್ನ ಪುಣ್ಯ ಪಾಪಗಳೆರಡೇ ಎದುರಿಗೆ ಬರುತ್ತವೆ.

  

ಅಪರಾಧಂ ಸಹೇತಾಲ್ಪಂ ತುಷ್ಯೇದಲ್ಪೇಽಪಿ ಚೋದಯೇ ।
ಮಹೋಪಕಾರಾಂಶ್ಚಾಧ್ಯಕ್ಷಾನ್ ಪ್ರಗ್ರಹೇಣಾಭಿಪೂಜಯೇತ್ ॥

—ಕೌಟಿಲ್ಯ.

ವ್ಯಕ್ತಿಯು ಸಣ್ಣ ತಪ್ಪುಗಳನ್ನು ಸಹಿಸಬೇಕು. ಸ್ವಲ್ಪ ಏಳಿಗೆಯಾದರೂ ಸಂತೋಷ ಪಡಬೇಕು. ಪ್ರತ್ಯಕ್ಷವಾಗಿ ಹೆಚ್ಚು ಉಪಕಾರ ಮಾಡಿದವರನ್ನು ಆತ್ಮೀಯತೆಯಿಂದ ಗೌರವಿಸಬೇಕು.

  

## ಅಮೃತ ಬಿಂದು

ನವಂಬರ್ ಒಂದು ಅತ್ಯಂತ ಮಹತ್ವದ ನಾಡಹಬ್ಬವಾಗಿ ಆಚರಿಸಬೇಕೆಂಬುದರಲ್ಲಿ ಒಮ್ಮತದ ಅಭಿಪ್ರಾಯ ಮೂಡಿಬರಬೇಕು. ಕಾರಣ ೧೯೫೩ ರಲ್ಲಿ ಬಳ್ಳಾರಿ ಹಳೆಯ ಮೈಸೂರಿಗೆ ಸೇರಿಕೊಂಡಿತು. ೧೯೫೬ರಲ್ಲಿ ಬೊಂಬಾಯಿ ಹೈದರಾಬಾದು ಕರ್ನಾಟಕ ಭಾಗಗಳು, ಕನ್ನಡ ಭಾಗಗಳು ಮತ್ತು ಕೊಡುಗು ಸೇರಿ ವಿಶಾಲ ಮೈಸೂರಾಯಿತು. ೧೯೭೩ರಲ್ಲಿ ಕನ್ನಡ ರಾಜ್ಯಕ್ಕೆ 'ಕರ್ನಾಟಕ'ವೆಂದು ನಾಮಕರಣವಾಯಿತು. ೧೯೭೮ರಲ್ಲಿ ಆಡಳಿತ ಭಾಷೆ ಕನ್ನಡವಾಯಿತು. ೧೯೮೦ನೆಯ ನವೆಂಬರ್ ಒಂದರಿಂದ ರಜತದ ವರ್ಷದ ಆರಂಭ. ಈ ವರ್ಷದಲ್ಲಿ ಇನ್ನೂ ಅನೇಕ ಮಹತ್ಕಾರ್ಯಗಳು ನಡೆಯಬೇಕಾಗಿದೆ. ಕನ್ನಡವನ್ನು ಮಾತನಾಡುವ, ಅನೇಕ ಆಚಾರ ವಿಚಾರ ಸಂಸ್ಕೃತಿ ಸಮನ್ವಯತೆಯಲ್ಲಿ ಸಮಾನತೆಯನ್ನು ಹೊಂದಿರುವ ಕಾಸರಗೋಡು, ಸೊಲ್ಲಾಪುರ ಮೊದಲಾದ ಪ್ರದೇಶಗಳು ಸೇರ್ಪಡೆಯಾಗಬೇಕಾಗಿದೆ. ಆಡಳಿತ ದಿಟವಾಗಿಯೂ ಕನ್ನಡದಲ್ಲಿಯೇ ನಡೆಯುತ್ತಿದೆಯೆಂಬ ಭಾವನೆ ಶ್ರೀ ಸಾಮಾನ್ಯನಿಗೂ ಮುಟ್ಟಬೇಕಾಗಿದೆ. ಪರಭಾಷಾ ವ್ಯಾಮೋಹ ತಪ್ಪಿ ನಾವುಗಳು ಅಚ್ಚ ಕನ್ನಡಿಗರಾಗಿ ಉಳಿಯುವ ಕಾಲ ಬರಬೇಕಾಗಿದೆ. ನಮ್ಮನ್ನು ನುಂಗುತ್ತಿರುವ ಪೀಡೆಗಳು ತೊಲಗಿ ಹೊಸ ಕನ್ನಡನಾಡು ಉದಯವಾಗಲಿ. ಪ್ರತಿಯೊಬ್ಬ ಕನ್ನಡಿಗನ ಸರ್ವಾಂಗೀಣ ಅಭಿವೃದ್ಧಿ ಮೊದಲು. ಈ ಪವಿತ್ರ ಸಂಕಲ್ಪವನ್ನು ತೊಡುವ ನಾಡಹಬ್ಬವಾಗಿ ಸರ್ವರ ಸಂಕಲ್ಪೋತ್ಸವವಾಗಲೆಂದು ಆಶಿಸೋಣ.

—ದುಂಬಿ

# ಸಾಂಸ್ಕೃತಿಕ ಹಿರಿಹಬ್ಬ ದೀಪಾವಳಿ

( ಕಿರು ವಿವೇಚನೆ )

—ಎನ್. ಎಸ್. ಗದಗಕರ

"This festival kindles in every heart hope for the future and feeling of brothers hood with the heart over flowing with love and good will"

—J. Saroj

ಇರುಳಿನ ಜರತಾರಿ ವಸನದ ತುಂಬ ಅಸಂಖ್ಯಾತ ಜ್ಯೋತಿಗಳು ಝುಗಝುಗಿಸುವವು. ಪಟಾಕಿ, ಹಗಲು ಸಂಜು, ಢಡಲ್ ಬಾಜಿಗಳು ಎಲ್ಲೆಡೆ ಹೊರ ಹೊಮ್ಮಿ ಆಗಸವು ಬೆಳಗುವುದು. ಮಕ್ಕಳ ಮೈಮೇಲೆ ಹೊಸ ಬಟ್ಟೆ, ಬಂಧು ಬಳಗದವರ ಅಭಿನಂದನೆ, ಆಶೀರ್ವಚನ ಆನಂದದ ಪರಮಾವಧಿ. ಇಂಥದೇ ದೀಪಾವಳಿಯ ದೀಪೋತ್ಸವ !

ಮನೆ ಮನೆಗಳಲ್ಲಿ ದೀಪೋತ್ಸವ ನಡೆದಿರುವುದರಿಂದ ಎಂಥ ಉನ್ಮಾದ ! ಹೊಸ್ತಿಲಿಗೆ ಅಂಗಳಕ್ಕೆ ಬಣ್ಣ ಬಣ್ಣದ ರಂಗೋಲಿಯ ರೇಖಾ ವಿನ್ಯಾಸ, ಚಿತ್ರಗಳು ! ಅಪರ್ಯಾಪ್ತ ಸಿಹಿ ತಿನಿಸುಗಳ ರಸದೂಟ !

ಹಿಂದೂ ಪಂಚಾಂಗದಲ್ಲಿ ದೀಪಾವಳಿ ಅತ್ಯಂತ ಮಹತ್ವದ ಹಬ್ಬ. ಏನು ಉತ್ಸಕತೆ ಆಗ ! Cleanliness is next to godliness' ಈಗಿನ ಸೂತ್ರ. ಅಂತೇ ಅಂಗಡಿಗಳೂ ಮನೆ ಮನೆಯಂತೆ ಲಕಲಕಿಸುವವು.

## ಬೆಳಕಿನ ಆವಿರ್ಭಾವ

ಈ ಎಲ್ಲ ಸಮಾರಂಭದ ಹಿನ್ನೆಲೆಯಲ್ಲಿ ಒಂದು ಸಾಮಾಜಿಕ, ಸಾಂಸ್ಕೃತಿಕ ಸಂಪತ್ತು ನೆಲಸಿರುವದು. ಅನ್ಯಾಯವನ್ನು ಮೆಟ್ಟಿ ನಿಂತ ಸತ್ವದ ಪ್ರತೀಕ ಈ ದೀವಳಿಗೆ ಹಬ್ಬ !

ದೀಪಾವಳಿಯ ಉಗಮ ತೀರಾ ಪ್ರಾಚೀನ ಕಾಲದ್ದು. ಈ ಹಬ್ಬದ ಪರಿಸರದಲ್ಲಿ ಅಸಂಖ್ಯಾತ ಪೌರಾಣಿಕ ಸನ್ನಿವೇಶಗಳು ನೆಲಸಿರುವವು. ಐದು ದಿನ ಸತತವಾಗಿ ಈ ಉತ್ಸವ ಜರುಗುವುದು. ಇಲ್ಲಿಯ ಪ್ರತಿ ದಿನಕ್ಕೆ ವಿಶೇಷ ಮಹತ್ವ ಪ್ರಾಶಸ್ತಿಯುಂಟು.

ಇದರ ಮೊದಲು ದಿನ ಧನತ್ರಯೋದಶಿಯಂದು ಲಕ್ಷ್ಮಿಯ ಪೂಜೆ ನಡೆಯುವದು. ಸ್ನಾನಾನಂತರ ಹಿಂದೂ ಕುಟುಂಬಗಳಲ್ಲಿಯ ಜನರು ಹೊಸ ಉಡಿಗೆ ತೊಡಿಗೆಯಲ್ಲಿ ಮುಂದಿನ ಹಬ್ಬ ಆಚರಿಸಲು ಸನ್ನದ್ಧರಾಗುವರು.

ಮಹಿಳೆಯರು ಮನೆಯ ಅಂಗಳ ಶುಚಿಗೊಳಿಸಿ ರಂಗೋಲಿ ತೆಗೆಯುವರು. ಧನಲಕ್ಷ್ಮಿಯನ್ನು ಸ್ವಾಗತಿಸಲು ಸ್ವಸ್ತಿಕ ಚಿನ್ಹವನ್ನು ಬರೆಯುವರು.

ಎರಡನೆಯ ದಿನ ನರಕ ಚತುರ್ದಶಿ. ಕೃಷ್ಣನು ನರಕಾಸುರನನ್ನು ಸಂಹರಿಸಿದ ದ್ಯೋತಕವಿದು. ದೇವಲೋಕದ ಬಡಿಗನೆನಿಸಿದ ವಿಶ್ವಕರ್ಮನ ಮಗಳನ್ನು ನರಕಾಸುರನು ಕದ್ದೊಯ್ದನು. ತಡೆದು ಬಿಡಿಸಲು ಶ್ರೀಕೃಷ್ಣನು ಅಂದು ಹೆಣಗಿ ಜಯಶೀಲನಾದುದರ ಅಭಿನಂದನಾ ಸಂತಸ ಈ ದಿನದ್ದು. ಅಲ್ಲದೆ ಅವನು ಹದಿನಾರು ಸಾವಿರ ಸುರಸುಂದರಿಯರನ್ನು ಬಂಧನಗೊಳಿಸಿದ ಪ್ರಸಂಗ ಒಂದಿದ್ದಿತು. ತನ್ನ ಸಹಧರ್ಮಿಣಿ ಸತ್ಯಭಾಮೆಯ ಸಹಾಯದಿಂದ ಶ್ರೀಕೃಷ್ಣನು ಆ ದೇವತೆಗಳ ವಿಮೋಚನೆಗೆಯ್ದು ನರಕಾಸುರನನ್ನು ಸಂಹರಿಸಿದುದು ಸಂಸ್ಮರಣೀಯ ಅಪೂರ್ವ ಸನ್ನಿವೇಶ ದುಃಖಿ ಜನಾಂಗದಲ್ಲಿ ಸಂತಸದ ಹೊಳೆಯನ್ನು ಹರಿಸಿದುದು ಮಹತ್ವದ ಘಟನೆ!

ಇನ್ನೊಂದು ಪೌರಾಣಿಕ ಕತೆ ಪ್ರರೂಢ ಇರುವುದು. ದೇವತೆಗಳ ಮಾತೆ ಎನಿಸಿದ ಅದಿತಿಯ ಕಿವಿಯ ಅವತಂಸವನ್ನು ನರಕಾಸುರನು ಅಪಹರಿಸಿದ್ದನಂತೆ. ಆಕೆ ಶ್ರೀಕೃಷ್ಣನ ಸಹಾಯವನ್ನು ಯಾಚಿಸಿದಳು. ಬಲಶಾಲಿ ಶ್ರೀಕೃಷ್ಣನು ದೈತ್ಯನೊಡನೆ ಹೋರಾಡಿ ಆಭರಣವನ್ನು ಮರಳಿ ಮುಟ್ಟಿಸುವಲ್ಲಿ ಯಶಸ್ವಿಯಾದುದು ಬೇರೊಂದು ಪ್ರಸಂಗ.

ದೀಪಾವಳಿಯ ಮೂರನೆಯ ದಿನ ಅಮಾವಾಸ್ಯೆ. ಅಂದು ಸಂಧ್ಯಾಕಾಲದಲ್ಲಿ ಲಕ್ಷ್ಮಿ ಪೂಜೆ ಬಲು ವಿಜೃಂಭಣೆಯಿಂದ ನೆರವೇರುವುದುಂಟು. ವ್ಯಾಪಾರಸ್ಥರು ಹಳೆಯ

( 26 ನೇ ಪುಟ ನೋಡಿ )

# ಉತ್ತಮ ಆಡಳಿತದಲ್ಲಿ 'ನಿಧಾನ' ತಡೆಗೆ ಎಡೆಯಿಲ್ಲ.

**ಕರ್ನಾಟಕದ ಮಾನ್ಯ ಮುಖ್ಯ ಮಂತ್ರಿಗಳಾಗಿ ಶ್ರೀ ಗುಂಡೂರಾವ್ ಅವರು ಅಧಿಕಾರ ವಹಿಸಿಕೊಂಡ ಕೇವಲ ಒಂಭತ್ತು ತಿಂಗಳ ಅವಧಿಯಲ್ಲಿ ಅವರು ನೀಡಿದ ಹಲವಾರು ಆಶ್ವಾಸನೆಗಳಲ್ಲಿ ಮುಖ್ಯವಾದದ್ದು 'ದಕ್ಷ ಆಡಳಿತ' ತನ್ನ ಆಶ್ವಾಸನೆಯನ್ನು ಕಾರ್ಯರೂಪಕ್ಕೆ ತರಲು ಜಡಭರಿತ ಕಡತಗಳ ವಿಲೇವಾರಿ ಮಾಡಲಾಗಿದೆ. ಇಂದು ರಾಜ್ಯೋತ್ಸವದಂದು ಯಾವುದೇ ಒಂದು ಹಳೇ ಕಡತವು ಪರಿಹಾರ ಕಾಣದೇ ಉಳಿದಿಲ್ಲ? ಕೆಲವೇ ತಿಂಗಳಲ್ಲಿ ಸರ್ಕಾರ ನೀಡಿದ ಆಶ್ವಾಸನೆಗಳೇನು? ಸಾಧನೆಗಳೇನು? ಎಂಬುದನ್ನು ಗಮನಿಸಿದಾಗ..........**

**ಉತ್ತಮ ಆಡಳಿತ ನಡೆಸುವ ಫಲ. ಅನುಗುಣವಾಗಿ ನಡೆಯುವ ಆಶಯ ಆಶ್ವಾಸನೆಗೆ**

ಶಾಂತಿಪಾಲನೆ, ಪ್ರಗತಿ ಸಾಧನೆ, ಕಲ್ಯಾಣ ಸ್ಥಾಪನೆ. ಇಂತಹ ಹತ್ತು ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತರುವ ಆಶ್ವಾಸನೆಗಳ ಸರಮಾಲೆ.

ಈ ಹೊಸ ಸರ್ಕಾರ ಒಂಭತ್ತು ತಿಂಗಳ ಹಿಂದೆ ಅಧಿಕಾರ ವಹಿಸಿಕೊಂಡಾಗ ಒಂದು ಪ್ರಮಾಣ ವಚನವನ್ನು ಸ್ವೀಕರಿಸಿತು. 'ಕೇವಲ ಆಶ್ವಾಸನೆ ನೀಡುವುದಲ್ಲ....ನೀಡಿದಂತೆ ನಡೆಯುವುದು' ಅಧಿಕಾರ ವಹಿಸಿಕೊಂಡ ಒಂಭತ್ತು ತಿಂಗಳ ಈ ಅಲ್ಪ ಸಮಯದಲ್ಲೇ ಸರ್ಕಾರ ತನ್ನ ಆಶ್ವಾಸನೆಗಳನ್ನು ಹಲವು ವಿಧಗಳಲ್ಲಿ ಕಾರ್ಯ ರೂಪಕ್ಕೆ ತಂದಿದೆ.

**ಶಿಫಾರಸ್ಸು ಪ್ರಭಾವಗಳ ಪಲಾಯನ**

ಹೂಂ. ಯಾರಿಗೆ ಎಲ್ಲಿಗೆ ಬೇಕು ಅಲ್ಲಿಗೆ ವರ್ಗ. ಯೋಗ್ಯತೆ ಇರಲಿ ಬಿಡಲಿ ಕೊಡಿ ಅವನಿಗೆ ಬಡ್ತಿ. ಇದು ಕತ್ತಲಲ್ಲಿ ಕಂಡ ಕನಸಲ್ಲ....ಸರಿಯಾದ ಪ್ರಭಾವ ಬೀರುವ ವ್ಯಕ್ತಿಯನ್ನು ಹಿಡಿದಲ್ಲಿ ಹಿಂದಿನ ದಿನಗಳಲ್ಲಿ ಏನು ಬೇಕಾದರೂ ಸಾಧಿಸಬಹುದಾಗಿತ್ತು. ಆದರೆ ಈಗ ಅದೆಲ್ಲ ಗತಕಾಲದ ಕಥೆ, ಇಂದು, ಕಾಯಿದೆ, ಕಟ್ಟಳೆಗಳು ಎಲ್ಲರಿಗಾಗಿ, ಸಾರ್ವಜನಿಕರ ಹಿತಕ್ಕಾಗಿ, ಕೇವಲ ಕೆಲವೇ ಜನರ ಹಕ್ಕಲ್ಲ. ಎಂಬುದನ್ನು ಎಲ್ಲರಿಗೂ ಮನದಟ್ಟು ಮಾಡಲಾಗಿದೆ.

ಪ್ರಭಾವಿ ವ್ಯಕ್ತಿಗಳ ಹಿಂದೆ ಮುಂದೆ ಇದ್ದು ಕಾರ್ಯಸಾಧನೆಗಳನ್ನು ಮಾಡುತ್ತ ಮೆರೆಯುತ್ತಿದ್ದವರ ಸೊಲ್ಲು ಇಲ್ಲವಾಗಿದೆ.

**ಕಡತಗಳು....ಕಣ್ಣು ಬಾಯ್ಬಿಟ್ಟು, ಉಸಿರು ಕಟ್ಟಿ ಇನ್ನು ಕಾಯಬೇಕಾಗಿಲ್ಲ.**

ಸರ್ಕಾರದ ಅಪ್ಪಣೆಗಾಗಿ, ಉತ್ತರಕ್ಕಾಗಿ ಕಳುಹಿಸಿದ ಕಾಗದ ಕಡತ ಸೇರಿ, ಜಡಭರಿತವಾಗುತ್ತ. ಪ್ರತಿ ಭಾರಿಯೂ ನಿಧಾನ, ತಡಕ್ಕೆ ಒಂದೊಂದು ಕಾರಣ ಕೇಳುತ್ತಿದ್ದುದು....ಮತ್ತೊಂದು ಗತಕಾಲದ ಮಾತು.

ಪ್ರತಿಯೊಂದು ವಿಷಯದಲ್ಲೂ ಶೀಘ್ರಗತಿ, ನಿಷ್ಠೆ, ಕಾರ್ಯ ತತ್ಪರತೆಯ ಮಹತ್ವವನ್ನು ರಾಜ್ಯಮಟ್ಟದಿಂದ ತಾಲ್ಲೂಕು ಮಟ್ಟದವರೆಗೂ ಎಲ್ಲ ವಲಯಗಳಲ್ಲೂ ಇದೇ ನಿಲುವು ಮನವರಿಕೆ ಮಾಡಲಾಗಿದೆ.

ಈಗ ನಿರ್ಮಿಸಿರುವ ವಾತಾವರಣದಲ್ಲಿ ಯಾರು ತಮ್ಮ ಕೆಲಸಗಳಿಗಾಗಿ ಅಲೆದಾಡುವ ಅವಶ್ಯಕತೆಯಿಲ್ಲ. ಅಷ್ಟಾಕೆ ನಿಮ್ಮ ಮನೆಬಾಗಿಲಲ್ಲೇ ನಿಮ್ಮ ಅಗತ್ಯಗಳೆಲ್ಲವುಗಳ ಪೂರೈಕೆ.

ಕೆಲವು ನಿದರ್ಶನಗಳನ್ನು ನೀಡುವುದಾದರೆ ಕಡತಗಳ ವಿಲೇವಾರಿಯ ಈ ಎರಡು ತಿಂಗಳಲ್ಲಿ ಸುಮಾರು 2¼ ಲಕ್ಷ ಫೈಲುಗಳು ವಿಲೇವಾರಿಯಾಗಿವೆ. ಕೋರ್ಟಿನ ತೀರ್ಮಾನಕ್ಕಾಗಿ ಕಾದಿರುವ ಕಡತಗಳು ಮಾತ್ರ ಇನ್ನೂ ತೀರ್ಮಾನವಾಗಬೇಕಾಗಿದೆ.

**ಜಡತ್ವಕ್ಕೆ ಜಾಗವಿಲ್ಲ..........**

ಸರ್ಕಾರ ಕೈಗೊಂಡ ಮತ್ತೊಂದು ಪ್ರಮುಖ ನಿರ್ಧಾರ ನಾಯಿ ಕೊಡೆಗಳಂತೆ ಹತ್ತು ಹಲವಾರು ಅ ನಾ ವ ಶ್ಯ ಕ ಮಂಡಲಿ ಸಮಿತಿಗಳ ರದ್ದು, ನಾನಾ ರೀತಿಯ 36 ಅನುಪಯುಕ್ತ ಸಂಸ್ಥೆಗಳ ರದ್ದು ಸಾರ್ವಜನಿಕ ಬೊಕ್ಕಸಕ್ಕೊಂದು ಭಾರಿ ಉಳಿತಾಯ.

**ಪಾತಕಿ ಪಾರ್ಥೇನಿಯಂ........**

ನಗರದ ಸುತ್ತ ಮುತ್ತಲಿನಲ್ಲಿ ಹರಡಿ, ಅರಳಿದ ಪಾರ್ಥೇನಿಯಂ ಅನ್ನು ನಿರ್ಮೂಲನಗೊಳಿಸಿ ಸುಂದರ ನಗರದ ಸಸ್ಯ ಸಂಪತ್ತನ್ನು ಹೆಚ್ಚಿಸುವ.

ಕಳೆಈ ಭಯಂಕರ ಮಾರಕ ಎಂಬುದನ್ನು ಅರಿತು ಈಗಾಗಲೇ 2000 ಎಕರೆಗೂ ಹೆಚ್ಚು ಕಳೆಯನ್ನು ಕಿತ್ತು ಧ್ವಂಸ ಮಾಡಬೇಕಾಗಿದೆ. ರಾಜ್ಯದ ಎಲ್ಲ ಭಾಗಗಳಿಗೂ ಈ ಕಾರ್ಯಕ್ರಮವನ್ನು ವಿಸ್ತರಿಸಲಾಗುತ್ತದೆ.

**ಒಮ್ಮತದಿಂದ ಒಂದಾಗುವ..........**

ರೈತಬಾಂಧವನ ಕ್ಷೇಮಾಭಿವೃದ್ಧಿಗೆ ಸರ್ಕಾರ ಎಂದಿಗೂ ಬದ್ಧ. ಅವರ ಹಿತಾಸಕ್ತಿಯನ್ನು ಕಾಪಾಡುವುದೇ ಸರ್ಕಾರದ ಹಂಬಲ. ರೈತರ ಸಮಸ್ಯೆಗಳನ್ನು ಕೂಲಂಕಷವಾಗಿ ತಿಳಿಯಲು ಸರ್ಕಾರದಿಂದ ಸಮಿತಿಯೊಂದರ ನೇಮಕ. ರೈತರ ಈಗಿನ ಅಶಾಂತಿಯಿಂದ ಮಾತ್ರ ಸರ್ಕಾರ ಜಾಗೃತವಾಗಲಿಲ್ಲ. ರೈತರ ಹಿತರಕ್ಷಣೆಯ ದೃಷ್ಟಿಯಿಂದ ಸರ್ಕಾರ ಅವರಿಗೆ ದೊರಕಿಸಿಕೊಟ್ಟಿರುವ ಸೌಲಭ್ಯಗಳು ಹಲವಾರು.

ಪ್ರಥಮ ಹಾಗೂ ಮುಖ್ಯವಾದದ್ದು ಒಂದು ಕೋಟಿ ರೂಪಾಯಿಗಳ ನೇರ ಪರಿಹಾರ ರೈತರ ಕಲ್ಯಾಣಕ್ಕಾಗಿ ಸುಮಾರು 85 ಕೋಟಿಗಳ ವೆಚ್ಚದಲ್ಲಿ ನೀರಾವರಿ, ಕೃಷಿ ಸಾಧನ, ಉತ್ತಮ ಹೈಬ್ರಿಡ್ ತಳಿ, ರಸಗೊಬ್ಬರ ಮುಂತಾದವುಗಳ ನೀಡಿಕೆ. ನೀರು ದರ ಅಭಿವೃದ್ಧಿ ತೆರಿಗೆಗಳ ರದ್ದು, ನೀರೆತ್ತುವ ಪಂಪಿಗೆ ಬಳಸುವ ವಿದ್ಯುತ್ ದರದಲ್ಲಿ ಕಡಿತ ಕೃಷಿ ಉತ್ಪನ್ನಗಳ ಮೇಲಿನ ತೆರಿಗೆಯನ್ನು ಸಣ್ಣ ಮತ್ತು ಮಧ್ಯಮ ಹಿಡುವಳಿದಾರರ ತಕಾವಿ ಬಾಕಿಯ ರದ್ದು ಮುಂತಾದವು ರೈತರ ಒಳಿತಿಗಾಗಿಯೇ ಕೈಗೊಂಡ ಕ್ರಮಗಳು. ಕೃಷಿ ವಿಮಾ ಯೋಜನೆ ಪ್ರಸ್ತುತ ಐದು ತಾಲ್ಲೂಕುಗಳಲ್ಲಿ ಪ್ರಾಯೋಗಿಕವಾಗಿ ಪ್ರಾರಂಭವಾಗಿದೆ. ಇಷ್ಟರಲ್ಲೇ ಈ ಸೌಲಭ್ಯ ಇತರ ರೈತರಿಗೂ ದೊರೆಯಲಿದೆ.

ಕಬ್ಬು, ಕಡ್ಲೇಕಾಯಿಗೆ ಕನಿಷ್ಠ ದರದ ನಿಗದಿಯಲ್ಲದೇ, ರೈತರಿಗೆ ಹೆಚ್ಚಿನ ಪರಿಹಾರ ಹಾಗೂ ರಿಯಾಯಿತಿಗಳನ್ನು ನೀಡಲಾಗಿದೆ. ಈ ಪುನರ್ವಿಮರ್ಶಿತ ದರ ನಿಗದಿ ಕೇಂದ್ರ ಸರ್ಕಾರ ಶಿಫಾರಸು ಮಾಡಿರುವುದಕ್ಕಿಂತ ಆಕರ್ಷಕವಾಗಿದೆ. ವ್ಯವಸಾಯಕ್ಕೆ ನೀಡಬೇಕಾದ ಪ್ರಾಧಾನ್ಯತೆಯನ್ನು ನೀಡಲಾಗಿದೆ—ರೈತರಿಗೆ ದೊರೆತ ಬೇಕಾದಂತಹ ಎಲ್ಲ ಸವಲತ್ತುಗಳನ್ನು ದೊರಕಿಸಲಾಗಿದೆ. ಜೀವವಿಮೆ, ಕ್ಷೇಮನಿಧಿ ಮುಂತಾದ ಸೌಲಭ್ಯಗಳನ್ನು ರೂಪಿಸಿ ಅವರ ಆರ್ಥಿಕ ಸಂಪತ್ತನ್ನು ಸುಧಾರಿಸಲು ಮಹತ್ತರ ಹೆಜ್ಜೆ ಇಡಲಾಗಿದೆ. ಈ ರೀತಿಯ ಸವಲತ್ತುಗಳನ್ನು ಬೇರೆ ಯಾವ ರಾಜ್ಯಸರ್ಕಾರವೂ ಇದುವರೆವಿಗೆ ನೀಡಿಲ್ಲ.

**ಆಶ್ವಾಸನೆಯನ್ನು ಇನ್ನೂ ಹಲವು ವಿಧಗಳಲ್ಲಿ ಆಚರಣೆಗೆ ತರಲಾಗಿದೆ.**

* ಕಲಾವಿದರಿಗೆ ಮಾಶಾಸನ, ಗೌರವಧನ.
* ನಿಮ್ನ ಮತ್ತು ಹಿಂದುಳಿದ ಪಂಗಡಗಳಿಗೆ ಹೆಚ್ಚಿನ ಉದ್ಯೋಗ ಭರವಸೆ.
* ನಿಮ್ನ ಮತ್ತು ಹಿಂದುಳಿದ ಪಂಗಡಗಳಿಗೆ ಉತ್ತಮ ಬಡ್ತಿ ಅವಕಾಶಗಳು.
* ದುರ್ಬಲ ವರ್ಗದವರಿಗಾಗಿ ಒಂದು ಲಕ್ಷ ಮನೆಗಳು.
* ಉತ್ತಮ ಗ್ರಾಮ ಸಂಪರ್ಕ ಯೋಜನೆ (18.7 ಕೋಟಿ ರೂಪಾಯಿಗಳು)
* ಪ್ರತಿ ಹಳ್ಳಿಗೂ ಕುಡಿಯುವ ನೀರಿನ ವ್ಯವಸ್ಥೆ.
* ನಿವೃತ್ತಿ ವಯಸ್ಸನ್ನು ಹೆಚ್ಚಿಸದೆ, ನಿವೃತ್ತಿಯಾದವರ ಮರು ನೇಮಕ ಮಾಡದೆ ನಿರುದ್ಯೋಗಿ ಯುವಕರಿಗೆ ಹೆಚ್ಚಿನ ಉದ್ಯೋಗಾವಕಾಶಗಳ ನೀಡಿಕೆ.
* ಜ್ಞಾನ ಮಂದಿರಗಳ ನಿರ್ಮಾಣ—ಶಾಲೆಯ ನಂತರ ಮಕ್ಕಳು ಅಭ್ಯಾಸ ಮಾಡಲು ದೀಪ ಮತ್ತು ಇತರ ಸಲಕರಣೆಗಳ ವ್ಯವಸ್ಥೆ.
* ಪ್ರತಿಯೊಂದು ಶಾಲೆಯಲ್ಲಿ ಶಾಲಾ ಆರೋಗ್ಯ ಕಾರ್ಯಕ್ರಮಕ್ಕೆ ಅನುಕೂಲ ಕಲ್ಪಿಸುವ ಯೋಜನೆ.
* ಆರೋಗ್ಯ ಕೇಂದ್ರಗಳಿಲ್ಲದ ಕಡೆ ಸಂಚಾರಿ ಆರೋಗ್ಯ ಕೇಂದ್ರಗಳ ವ್ಯವಸ್ಥೆ.
* ಬೀಡಿ ಕಾರ್ಮಿಕರು, ನೇಕಾರರ ಮತ್ತಿತರರಿಗೆ ಗುಂಪು ವಿಮಾ ಸೌಲಭ್ಯ.

"ಆಗಲಿ 25ನೇ ರಾಜ್ಯೋತ್ಸವ ದಿನ : ಸರ್ಕಾರ ಪೂರೈಸುವ ಆಶ್ವಾಸನೆಗಳ ಮಹೋತ್ಸವ ದಿನ"

**ಪ್ರಕಟಣೆ: ಕರ್ನಾಟಕ ವಾರ್ತಾ ಇಲಾಖೆ, 5, ಇನ್‌ಫೆಂಟ್ರಿ ರಸ್ತೆ ಬೆಂಗಳೂರು-560 001**

# ಮರ್ತ್ಯಲೋಕದ ಮಹಾಬೆಳಗು : ಉದ್ಧಾನಯತೀಶ

—ಚನ್ನಪ್ಪ ಎರೇಸೀಮೆ

ಮರುಳಸಿದ್ಧಮ್ಮನ ತೌರೂರು ಬಸವಾಪಟ್ಟಣ. ಈ ಹೆಸರು ಈ ಊರಿಗೆ ಬಂದುದು ಬೋಳಬಸವೇಶ್ವರರಿಂದ. ನಿರಂಜನ ಜಗದ್ಗುರು ಮಹಾ ಕಾರಣಿಕ ತೋಂಟದ ಸಿದ್ಧಲಿಂಗೇಶ್ವರರ ಕರಕಮಲ ಸಂಜಾತರು, ಅಪ್ರತಿಮ ಶಿವಯೋಗಿಗಳು ಆದ ಬೋಳಬಸವೇಶ್ವರರ ತಪೋಭೂಮಿ, ಬಸವಾಪಟ್ಟಣದ ಸಮೀಪದಲ್ಲಿಯೇ ಇದೆ. ಇದು ಶಿವಗಂಗೆಗೆ ಆಗ್ನೇಯದಿಗ್ಭಾಗದಲ್ಲೇ 3-4 ಮೈಲುಗಳ ಅಂತರದಲ್ಲಿಯೇ ಇದೆ. ಬಾಲ್ಯದಿಂದಲೂ ಬಸವಾಪಟ್ಟಣದಲ್ಲಿ ಮಾತಾಪಿತೃಗಳ ಮನೆಯಲ್ಲಿ ಬೆಳೆಯುತ್ತಿದ್ದ ಮರುಳುಸಿದ್ಧಮ್ಮನವರು ಬೋಳಬಸವೇಶ್ವರರಲ್ಲಿ ಅಪರಿಮಿತ ಭಕ್ತಿಭಾವ ತುಂಬಿಕೊಂಡು ಬೆಳೆದವರು. ಅಲ್ಲಿರುವ ಬೋಳಬಸವೇಶ್ವರರ ಗದ್ದುಗೆಗೆ ತನ್ನ ಅನಂತಭಕ್ತಿ ಪ್ರಣಾಮಗಳನ್ನು ಸಲ್ಲಿಸುತ್ತ ಬೆಳೆದಿದ್ದ ಮರುಳಸಿದ್ಧಮ್ಮ ಲಕ್ಕೂರಿನಲ್ಲೇ ತನ್ನ ಗಂಡನ ಮನೆಯಲ್ಲಿ ವಾಸಿಸುತ್ತಿದ್ದಾಗಲೂ ಆಗಾಗ ಎತ್ತಿನ ಬಂಡಿಯಲ್ಲಿ ಕುಳಿತು ಗಂಡನೊಡನೆ ಬಂದು, ಬೋಳಬಸವೇಶ್ವರರ ಗದ್ದುಗೆಗೆ ತನ್ನ ಭಕ್ತಿ ಕಾಣಿಕೆಯನ್ನು ಸಲ್ಲಿಸಿ ಹೋಗುತ್ತಿದ್ದಳು.[5] ಒಂದು ದಿನ ಎಂದಿನಂತೆ ತನ್ನ ಸೇವಾ ಕೈಂಕರ್ಯ ಪ್ರಕಟಿಸಲು ಬಂದಾಗ ಒಂದು ಅದ್ಭುತ ಘಟನೆ ನಡೆಯಿತು. ಬೋಳಬಸವೇಶ್ವರರ ಪೂಜಾದಿಗಳನ್ನು ಮುಗಿಸಿದಳು, ಪೂಜೆಮಾಡುತ್ತಾ ಮಾಡುತ್ತಾ ಗದ್ಗದ ಕಂಠಳಾಗಿ ಬೋಳಬಸವೇಶ್ವರರ ಗದ್ದುಗೆಯನ್ನೇ ಎವೆಯಿಕ್ಕದೆ ನೋಡುತ್ತಾ ಸ್ತಂಭೀಭೂತಳಾಗಿ ನಿಂತುಬಿಟ್ಟಳು. ಪತಿ ಗಟ್ಟಿಪ್ಪನವರು ಅಲುಗಾಡಿಸಿದರು ಮೈ ಮೇಲೆ ಪ್ರಜ್ಞೆಯಿಲ್ಲದವಳಂತೆ ಕಂಡು ಬಂದ ಅವಳು ಆನಂದ ತುಂದಿಲಳಾಗಿ ಗದ್ಗದಿತಳಾದಳು. ಬಿಕ್ಕಿ ಬಿಕ್ಕಿ ಅತ್ತಳು. ಒಂದು ಅಪೂರ್ವ ತೇಜೋರಾಶಿಯೇ ಅವಳ ಶಿವಲಿಂಗ ಸ್ಥಾನವಾದ ನೇತ್ರದ ಬೆಳಕಿನಲ್ಲಿ ಹೊಕ್ಕು ಎತ್ತೆತ್ತಲೂ ಪ್ರಕಾಶವನ್ನೇ ಕಾಣುವಂತಾದಳು. ಮರುಕ್ಷಣದಲ್ಲಿ

5 ಬೋಳ ಬಸವೇಶ್ವರರ ಗದ್ದುಗೆ ನಿರಂಜನ ವಂಶ ರತ್ನಾಕರದ ಪ್ರಕಾರ ಮಧುಗಿರಿಯಲ್ಲಿ ಆಗಿದೆಯೆಂದು ತಿಳಿದು ಬರುವುದು. ಆದರೆ ಶಿವಗಂಗೆಯಿಂದ ಮಾಗಡಿಗೆ ಹೋಗುವ ರಾಜಮಾರ್ಗದ ಪಕ್ಕದಲ್ಲಿಯೇ ಶಿವಗಂಗಾ ಬೆಟ್ಟದಿಂದ ಆಗ್ನೇಯ ದಿಗ್ಭಾಗದ ಕಂಬಾಳು ಮಠದ ಸಮೀಪದಲ್ಲಿ ಬಸವಾಪಟ್ಟಣದ ಹತ್ತಿರ ಇವರ ಗದ್ದುಗೆ ಇದೆ. ಗದ್ದುಗೆಯ ಮೇಲೆ ಶಿವಲಿಂಗ ಪ್ರತಿಷ್ಠೆ ಇದೆ ಸುತ್ತಲೂ ಭವ್ಯವಾದ ಆವರಣದಿಂದ ಆವೃತವಾಗಿ ಮಧ್ಯದಲ್ಲಿ ಸುಂದರವಾಗಿ ಕಟ್ಟಿಸಿರುವ ಈ ಬೋಳಬಸವೇಶ್ವರರ ಗದ್ದುಗೆ ಯಾವುದು? ಬಹುಶಃ ಬೋಳಬಸವೇಶ್ವರರು ಇಲ್ಲಿಯೇ ಲಿಂಗೈಕ್ಯರಾದರೇ? ಅಥವಾ ಮಧುಗಿರಿಯಲ್ಲಿ ಲಿಂಗೈಕ್ಯರಾದರೇ? ಸಂಶೋಧಿಸಬೇಕಾದ ಅಂಶವಾಗಿದೆ. ಇವರು ತೋಂಟದ ಸಿದ್ಧಲಿಂಗಯತಿಗಳ ಶಿಷ್ಯರಾಗಿ 96 ವರ್ಷಗಳವರೆಗೆ ಬಾಳಿ ಅನೇಕರಿಗೆ ಅನುಗ್ರಹವಿತ್ತು ಬಯಲಾದ ಪ್ರಭಾವಶಾಲಿ ನಿರಂಜನ ಜಗದ್ಗುರುಗಳು. 'ಬೋಳಬಸವೇಶ್ವರಾ ನಿಮ್ಮ ಧರ್ಮ, ನಿಮ್ಮ ಧರ್ಮ' ಎಂಬ ಅಂಕಿತದಲ್ಲಿ ಗುಮ್ಮಳಾಪುರದ ಸಿದ್ಧಲಿಂಗಯತಿಗಳು ವಚನ ಬರೆದಿದ್ದಾರೆ. ಈಗ 18 ವಚನಗಳು ಉಪಲಬ್ಧವಿವೆ. ಈ ಗುಮ್ಮಳಾಪುರದ ಸಿದ್ಧಲಿಂಗದೇವರೇ ಬೋಳಬಸವೇಶ್ವರರ ನಂತರ ಶೂನ್ಯ ಸಿಂಹಾಸನಾರೋಹಣ ಮಾಡಿದ್ದಾರೆಂದು ತಿಳಿದು ಬರುವುದು.

—(ಡಾ. ಆರ್. ಸಿ. ಹಿರೇಮಠ: ಸಂ. ಗುಮ್ಮಳಾಪುರದ ಸಿದ್ಧಲಿಂಗದೇವರ ಶೂ. ಸಂ. ಪ್ರಸ್ತಾವನೆ: ಪುಟ 14–15 ನೋಡಿ)

ಎಲ್ಲವೂ ಶಾಂತವಾಯಿತು. ಅಪೂರ್ವ ಆನಂದದಿಂದ ಧಾರಾಕಾರವಾಗಿ ಅನಂದಭಾಷ್ಪ ಸುರಿಸಿದಳು, ಎಚ್ಚರ ಗೊಂಡಳು. ಪತಿ ಗಟ್ಟಿಪ್ಪನವರಿಗೆ ಒಂದೂ ಅರ್ಥವಾ ಗದೆ ಗಜಭಜಿಸಿದರು. 'ಇದೇಕೋ ನಿನ್ನ ವರ್ತನೆ ಎಂದೂ ಇಲ್ಲದೆ ಇಂದೇಕೆ ಹುಚ್ಚಿಯಂತೆ ವರ್ತಿಸಿದೆ? ಎಂದರು. 'ಏನೂಇಲ್ಲ; ಇಂದು ಎಂದೂ ಇಲ್ಲದ ಏನೋ ಒಂದು ರೀತಿಯ ಬೆಳ್ಳಬೆಳಕನ್ನು ಕಂಡಂತಾಯಿತು. ಯಾವುದೋ ಬೆಳಕು ಸ್ವಾಮಿಯಿಂದ ಹೊರಹೊರಟು ನನ್ನ ಕಣ್ಣನ್ನು ಕುಕ್ಕಿಸಿದಂತಾಯಿತು. ನನಗೆ ಯಾವು ದೂ ಎಚ್ಚರವಿಲ್ಲದಂತೆ ಮಾಡಿತು. ಮಹಾ ಆನಂದ ವಾದಂತಾಯಿತು. ನೆಲಕ್ಕೆ ಕುಸಿದು ಬೀಳುವಂತಾಯಿತು. ಇತ್ಯಾದಿಯಾಗಿ ತನಗಾದ ಅನುಭವವನ್ನೆಲ್ಲ ಗಂಡನೆದುರು ಹೇಳಿದಳು. 'ಆಯಿತು ನಡೆ ಊರಿಗೆ ಹೋಗೋಣ' ಎಂದು ಗಾಡಿಯನ್ನು ಕಟ್ಟಿಕೊಂಡು ಲಕ್ಕೂರಿನತ್ತ ಹೊರಟು ಬಂದರು. ಮುಂದಿನ ಒಂದು ವರ್ಷಕ್ಕೆ ತನ್ನ ಕೊನೆಯ ಮಗ ರುದ್ರಪ್ಪನೊಡನೆ ಬೋಳಬಸವೇಶ್ವರರ ದರ್ಶನಕ್ಕೆ ಬಂದು ಬೋಳಬಸವೇಶ್ವರರ ಎದುರಿನಲ್ಲಿ ಎಳೆಯ ಶಿಶು ರುದ್ರಪ್ಪನನ್ನು ಇಟ್ಟು 'ಇದೋ ಸ್ವಾಮಿ ನಿನ್ನ ಪ್ರಸಾದ' ಎಂದು ಹೇಳಿ ತನ್ನ ಭಕ್ತಿ ಕೈಂಕರ್ಯ ಮುಗಿಸಿ ಬಂದರು.

ಈ ಘಟನೆ ನಡೆದ ಮೇಲೆ ಗಟ್ಟಿಪ್ಪ ಮರುಳ ಸಿದ್ಧಮ್ಮನವರ ಕೊನೆಯ ಶಿಶು ರುದ್ರಪ್ಪ ಬೆಳೆ ಬೆಳೆದಂ ತೆಲ್ಲ ಮನೆಯ ಸಿರಿ ಸಂಪತ್ತು ಬೆಳೆಯುತ್ತಾ ಬಂತು. ರುದ್ರಪ್ಪ ದಿನೇ ದಿನೇ ಬೋಳ ಬಸವೇಶ್ವರರ ಕಾರುಣ್ಯ ದ ಹಾಲು ಬೆಣ್ಣೆಯಲ್ಲಿ ಬೆಳೆಯ ತೊಡಗಿದನು. ತುಂಬಿದ ಮನೆ ರುದ್ರಪ್ಪನ ನಡೆ ನುಡಿ, ಕಾರ್ಯ ಗೌರವಗಳಿಂದ ಕಳಕಳಿಸ ತೊಡಗಿತು. ತನ್ನ ಮೊನಚಾದ ಮಾತಿನಿಂ ದಲೂ, ಧೀರ ನಡೆಯಿಂದಲೂ ಹೊಲ ಗದ್ದೆಗಳಲ್ಲಿನ ಉತ್ಸಾಹ ಪೂರ್ಣ ಕೆಲಸ ಕಾರ್ಯಗಳಿಂದಲೂ ಮನೆಯ ದನಕರು ಕುರಿ ಮೇಕೆಗಳ ಪಾಲನಾಕ್ರಿಯೆಯಿಂದಲೂ ಎಲ್ಲರ ಗಮನ ಸೆಳೆಯುತ್ತಿದ್ದನು. ಉಳಿದ ಬೇಸಾಯ ಗಾರರೆಲ್ಲ ಬಾಲಕ ರುದ್ರಪ್ಪನ ಉತ್ಸಾಹ ಶಕ್ತಿಗೆ ಮಾರು ಹೋದರು. ತಂದೆ ತಾಯಿಗಳು ಏಳೆಂಟು ವರ್ಷದ ತುಂಬಿದ ಮಗನನ್ನು ವಿದ್ಯಾಭ್ಯಾಸಕ್ಕೊಳಪಡಿಸಬೇಕೆಂದು ಪ್ರಯತ್ನಿಸಿದರು. ಆಗ ಲಕ್ಕೂರಿನಲ್ಲಿ ಶಾಲೆ ಇರಲಿಲ್ಲ. ಒತ್ತಾಯದಿಂದ ದಾಬಸಪೇಟೆಯಲ್ಲಿರುವ ಒಂದು ಕೂಲಿ ಮಠಕ್ಕೆ ಸೇರಿಸಿದರು, ನೇಯ್ಗೆಯ ಚಂದ್ರಣ್ಣ ಮತ್ತು ಮಲ್ಲಪ್ಪ ಇವರಿಬ್ಬರೂ ರುದ್ರಪ್ಪನ ಶಾಲಾ ಸ್ನೇಹಿತರಾ ದರು. ಶಾಲೆ ಬಿಟ್ಟೊಡನೆಯೇ ರುದ್ರಪ್ಪ ಈ ಸ್ನೇಹಿತ ರನ್ನೊಡಗೊಂಡು ಸಿದ್ಧನ ಬೆಟ್ಟದ ಸಂಚಾರ ಕೈಗೊಳ್ಳು ತ್ತಿದ್ದ- ಅಲ್ಲಿ ಅತ್ತಿ, ನೇರಳೆ, ಮಾವು-- ಮೊದಲಾದ ಮರಗಳನ್ನರಸಿ ಹಣ್ಣು ಕಿತ್ತು ತಿನ್ನುವುದು. ಪರಂಗಿ, ಕವಳಿ, ಕಾರೆ, ಬೋರೆ ಹಣ್ಣುಗಳನ್ನು ಸಂಗ್ರಹಿಸುವುದು, ಬೆಟ್ಟದಲ್ಲಿರುವ ವೀರಭದ್ರಮೂರ್ತಿಯ ಎದುರು ಗವಿಯ ಲ್ಲಿರುವ ಶಿವಲಿಂಗದೆದುರು ಹಣ್ಣನ್ನೆಲ್ಲ ಸುರುವಿ ನೈವೇದ್ಯ ಮಾಡುವುದು, ಅನಂತರ ತನ್ನ ಸ್ನೇಹಿತರೊಡನೆ ಅವನ್ನೆ ಲ್ಲವನ್ನು ತಿಂದು ತೇಗಿ ಮನೆಯ ಕಡೆಗೆ ದಾರಿ ಹಿಡಿಯು ತ್ತಿದ್ದ. ಒಮ್ಮೊಮ್ಮೆ ಗಂಭೀರತೆಯಿಂದ ಕೂಡಿದ ಅಲ್ಲಿರುವ ಗವಿಗಳನ್ನು ಕುತೂಹಲ ದೃಷ್ಟಿಯಿಂದ ಒಳ ಹೊಕ್ಕು, ಹೊರ ಬರದೆ ಅಲ್ಲಿಯೇ ಕುಳಿತು ಬಿಡುತ್ತಿದ್ದ. ಸ್ನೇಹಿತರೆಲ್ಲ ಹೆದರಿ ಹೊರಬಂದು ಕಿರಚಿ ಕರಚಿ ಕರೆ ದರೂ ಹೊರಬರುತ್ತಿರಲಿಲ್ಲ. ತನ್ನ ಮನಸ್ಸಿಗೆ ಬಂದಾಗ ಹೊರ ಬಂದು ಸ್ನೇಹಿತರನ್ನು ಕೂಡಿಕೊಂಡು ಮನೆಗೆ ಬರುತ್ತಿದ್ದ. ಒಮ್ಮೊಮ್ಮೆ ಉದ್ದಾನ ವೀರಭದ್ರನ ಗುಡಿ ಯಲ್ಲಿ ವೀರ ಭದ್ರನಂತೆ ನಿಂತು ನಟಿಸಿ ಸ್ನೇಹಿತರನ್ನು ನಗಿಸುತ್ತಿದ್ದ. ಈ ರೀತಿಯ ಆತನ ಬಾಲ್ಯದ ಪ್ರವೃತ್ತಿ ಗಳು ತಂದೆ ತಾಯಿಗಳಿಗೆ ತಲೆನೋವನ್ನುಂಟು ಮಾಡ ತೊಡಗಿದವು. ಮಗ ಅಷ್ಟಿಷ್ಟು ವಿದ್ಯಾಭ್ಯಾಸ ಮಾಡ ಲೆಂದು ಶಾಲೆಗೆ ಕಳಿಸಿದರೆ ಶಾಲೆಯ ಓದು ಬರಹಗ ಳಲ್ಲಿ ಆಸಕ್ತಿ ತೋರಿಸದೆ ಗಿರಿ ಗಹ್ವರಗಳನ್ನು ಸುತ್ತಾ ಡುವ ಮರಗಿಡಗಳನ್ನೇರುವ, ಅಡವಿ ಅಡವಿಗಳಲ್ಲಿ ಸುತ್ತಾಡುವ ಮಗನ ವ್ಯವಹಾರಗಳು ಅವರಿಗೆ ಅಲೌ ಕಿಕವಾಗಿ ಕಂಡವು, ಹೀಗೆ ನಾಲ್ಕೈದು ವರ್ಷಗಳು ಸಂದು ಹೋದವು. ಆ ವೇಳೆಗಾಗಲಿ ರುದ್ರಪ್ಪ ತನ್ನ ಅತ್ಯದ್ಭುತ ಪ್ರತಿಭೆಯಿಂದ ಅಲ್ಪ ಸ್ವಲ್ಪ ಓದಿ ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಪಡೆದಿದ್ದ. ಆದರೇನು ತಂದೆ ತಾಯಿಗಳ ಆಸೆ ಅಭಿಲಾಷೆಗಳಿಗೆ ತಕ್ಕ ಹಾಗೆ ಅವನು ಓದಲಿಲ್ಲವೆನ್ನಬಹುದು. ಆದರೆ ಸ್ವಲ್ಪ ಓದಿ ಬಹಳ ತಿಳಿದುಕೊಳ್ಳುವ ಸಾಮರ್ಥ್ಯವನ್ನು ಪಡೆದಿದ್ದನೆ ನ್ನಬಹುದು. ಕೊನೆಗೆ ರುದ್ರಪ್ಪ ಶಾಲೆಗೆ ಶರಣು ಹೊಡೆದು ಬಿಟ್ಟ.

### ಲೋಕದಲ್ಲಿ ಕೆಲವರು ದೊಡ್ಡವರಾಗಿಯೇ ಹುಟ್ಟುತ್ತಾರೆ:

ಲೋಕದಲ್ಲಿ ಅನೇಕ ಜನ ಮಹಾಪುರುಷರ ಬಾಲ್ಯಜೀವನ ಅದ್ಭುತ ರಮ್ಯವಾಗಿರುತ್ತದೆ. ಆದರೆ ಆ ಚರ್ಯೆಯನ್ನು ಅರ್ಥ ಮಾಡಿಕೊಳ್ಳುವವರೇ ಅಪರೂಪ. ದಿನೇ ದಿನೇ ರುದ್ರಪ್ಪನ ಬಾಲ್ಯಜೀವನ ಅದ್ಭುತ ರಮ್ಯವಾಗತೊಡಗಿತು. 11-12 ವರ್ಷ ವಯಸ್ಸಿಗೆ ನಿರ್ಭೀತನಾಗಿ ರುದ್ರಪ್ಪ ಹಗಲು ರಾತ್ರಿಯೆನ್ನದೆ ಸಿದ್ಧನಬೆಟ್ಟದ ಗವಿಗಳಲ್ಲಿ ರುದ್ರೇಶ್ವರ ದೇವಾಲಯದಲ್ಲಿ ಒಬ್ಬಂಟಿಗನಾಗಿ ಸುತ್ತಾಡುತ್ತ ಗಂಟೆ ಗಂಟೆಗಳವರೆಗೆ ಧ್ಯಾನಮಗ್ನನಾಗಿ ಕುಳಿತುಕೊಂಡುಬಿಡುತ್ತಿದ್ದ. ಈ ವ್ಯವಹಾರದಲ್ಲಿ ಅವನಿಗಾಗುವ ಆನಂದ ಬೇರೆ ವ್ಯವಹಾರಗಳಲ್ಲಿ ಆಗುತ್ತಿರಲಿಲ್ಲ. ಕೊನೆಗೆ ತಂದೆ-ತಾಯಿಗಳು ಈ ಮಗನಿಗೆ ಮೇಕೆ ಕುರಿಗಳನ್ನು ಕಾಯ್ದುಕೊಂಡು ಬರುವ ಕೆಲಸಕ್ಕೆ ನೇಮಿಸಿಬಿಟ್ಟರು. ರುದ್ರಪ್ಪನಿಗೆ ಬೇಕಾದುದೂ ಅದೇ.

ಲೋಕದಲ್ಲಿ ಕೆಲವರು ದೊಡ್ಡವರಾಗಿಯೇ ಹುಟ್ಟುತ್ತಾರೆ; ಕೆಲವರು ಹುಟ್ಟಿದ ಮೇಲೆ ದೊಡ್ಡವರಾಗುತ್ತಾರೆ. ಹುಟ್ಟಿನೊಡನೆಯೇ ಕೆಲವರು ಮಹನೀಯರಾಗುತ್ತಾರೆ; ಕೆಲವರು ಹುಟ್ಟಿದ ಮೇಲೆ ಮಹನೀಯರಾಗುತ್ತಾರೆ. ರುದ್ರಪ್ಪ ಹುಟ್ಟಿನೊಡನೆಯೇ, ದೊಡ್ಡತನವನ್ನೂ, ಮಹನೀಯತನವನ್ನೂ ಮೈ ಮ ನ ಕ್ಕಂ ಟಿ ಸಿ ಕೊಂಡು ಬಂದ ದಿವ್ಯ ಚೇತಸ್ಸುಳ್ಳವನು. ಲೋಕಸಾಮಾನ್ಯ ನಡೆನುಡಿಗಳಿಂದ ವಿಭಿನ್ನವಾದ ರುದ್ರಪ್ಪ ಬಾಲ್ಯದಿಂದಲೇ ಪವಾಡ ಪುರುಷನಾಗಿ ಬೆಳೆದು ಬಂದವನು. ಅಹಿಂಸೆ. ತ್ರಿಕರಣ ಶುದ್ಧಿಗಳು ಹುಟ್ಟಿನೊಡನೆ ರುದ್ರಪ್ಪನಿಗೆ ಬೆಳೆದುಬಂದವು. ಅಂತೆಯೇ ಜೀವನ ನಡೆನುಡಿಗಳಲ್ಲಿ ವ್ಯವಹಾರಗಳಲ್ಲಿ ಪವಾಡಸದೃಶ. ಅನೇಕ ಘಟನೆಗಳು ಬಾಲ್ಯದಲ್ಲಿಯೇ ನಡೆದು ಬರತೊಡಗಿದವು. ಪವಾಡಗಳ ವಿಷಯದಲ್ಲಿ ಒಂದು ಮಾತು; ಪವಾಡದ ಮಾತೆತ್ತಿದೊಡನೆಯೇ ಕೆಲವು ವಿಜ್ಞಾನಿಗಳು ಮೂಗು ಮುರಿಯುವುದು, ಇತ್ತೀಚಿನ ಪ್ರವೃತ್ತಿಗಳಲ್ಲಿ ಒಂದು. ವಿಜ್ಞಾನ ಕಾರ್ಯ ಕಾರಣ ಸಂಬಂಧವನ್ನು ಕೇಳುತ್ತದೆ; ಪವಾಡಗಳಲ್ಲಿ ಕಾರಣ ಕಾಣುವುದಿಲ್ಲ. ಕಾರ್ಯ ಕಾಣುತ್ತದೆ. ಆಗ ಅವರು ಕಾರಣವಿಲ್ಲದೆ ಕಾರ್ಯವಾದ ಬಗೆಗೆ ಸಂಶಯ ತಾಳುತ್ತಾರೆ. ಆದರೆ ಬಹು ಜನ ವಿಚಾರವಾದಿಗಳು ಪವಾಡಗಳನ್ನು ನಂಬುತ್ತಾರೆ. ಅಲ್ಲಿ ಕಾರಣವೆಂಬುದು ಕಣ್ಣಿಗೆ ಕಾಣದಿದ್ದರೂ ಅದು ಇದ್ದೇ ಇದೆ. ಆದರೆ ಅದು ವ್ಯಕ್ತಿ ಶಕ್ತಿಯ ಪ್ರಭಾವದಲ್ಲಿ ಅಡಕವಾಗಿ ಲೋಕಕ್ಕೆ ಸ್ಪಷ್ಟವಾಗಿ ಗೋಚರಿಸುವುದಿಲ್ಲವಾಗಿ ಕಾರ್ಯಕಾರಣ ಸಂಬಂಧವಾದಿಗಳು ಅಲ್ಲಗಳೆಯುತ್ತಾರೆ. ಆತ್ಮಶಕ್ತಿಯ ಅಪಾರ ತೇಜಸ್ಸು ಆ ಶಕ್ತಿಯನ್ನು ಗಳಿಸದಿದ್ದವರಿಗೆ ಒಮ್ಮೊಮ್ಮೆ ಸಂಶಯಕ್ಕೀಡು ಮಾಡುವುದುಂಟು. ಶಿವಯೋಗದ ಅಥವಾ ಯೋಗದ ಸಾಧನಾಬಲದಿಂದ ಸಿದ್ಧಿಗೊಂಡ ಅದ್ಭುತವಾದ ಆತ್ಮ ಶಕ್ತಿಯ ಅಭಿವ್ಯಕ್ತಿಯು ಲೋಕಕ್ಕೆ ಪವಾಡವಾಗುತ್ತದೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಪಂಚಕೋಶಗಳ ಕಂಚುಕ ನಾಶವಾಗಿ ಅಂದರೆ ಪ್ರಾಕೃತಿಕ ಗುಣಗಳನ್ನು ಯೋಗಶಕ್ತಿ ಬಲದಿಂದ ಕೆಡಿಸಿದಾಗಲೇ ಯೋಗಶಕ್ತಿಯು ಪ್ರಕಟಗೊಂಡು ಪವಾಡಗಳು ಲೋಕಕ್ಕೆ ಕಾಣಬರುತ್ತವೆ. ಆದರೆ ಅನೇಕ ಜನ ಶಿವಯೋಗಿಗಳು ಆ ಶಕ್ತಿಯನ್ನು ಪ್ರಕಟಿಸುವುದಿಲ್ಲ. ಪ್ರಕಟಿಸಿದರೂ ಶಿಷ್ಟ ರಕ್ಷಣೆಗಾಗಿ ಕೆಲವು ವೇಳೆ ಅವು ಮೀಸಲಾಗಿರುತ್ತವೆ. ಅಷ್ಟಾಂಗ ಯೋಗ ನಿರತರು ಕೆಲವರು ಪ್ರಕಟಿಸುವುದುಂಟು. ಆದರೆ ಪ್ರಕಟಿಸುವುದೂ ಕೂಡ ಲೋಕಹಿತಕ್ಕೆ. ಲೋಕ ಹಿತಕ್ಕೆ ಧಕ್ಕೆ ತರುವ ರೀತಿಯಲ್ಲಿ ಕೆಲವರು ಪ್ರಕಟಿಸಿ ತಮ್ಮ ಶಕ್ತಿಯ ದುರುಪಯೋಗ ಮಾಡಿಕೊಳ್ಳುವುದೂ ಉಂಟು.[5] ಅದೇನೇ ಇರಲಿ ಶಕ್ತಿಯು ಸಂಕುಚಿತಗೊಂಡಾಗ ವ್ಯಕ್ತಿ ಪ್ರಕೃತಿಬದ್ಧನಾಗಿ ಜೀವಕ ನೆನಿಸುತ್ತಾನೆ. ಶಕ್ತಿಯ ಪೂರ್ಣ ವಿಕಸಿತ ಸ್ಥಿತಿಯಲ್ಲಿ ವ್ಯಕ್ತಿ ಶಿವನಾಗಿ ಪ್ರಕೃತಿಯುಕ್ತನಾಗುತ್ತಾನೆ ಇಲ್ಲವೆ ಶಕ್ತಿ ವಿಶಿಷ್ಟನಾಗುತ್ತಾನೆ. ಅಂಥ ವ್ಯಕ್ತಿ ಪ್ರಕೃತಿಯ ಮೇಲೆ ಪ್ರಭುತ್ವ ಸ್ಥಾಪಿಸಿದ ಪ್ರಭುವಾಗುತ್ತಾನೆ. ಇಂಥ ಪ್ರಭುತ್ವ ಪಡೆದ ವ್ಯಕ್ತಿ ಅಪ್ರಾಕೃತತ್ತ್ವ ಪಡೆದ ದಿವ್ಯ ಮಾನವನೆನಿಸುತ್ತಾನೆ. ಅಂಥ ಅಪ್ರಾಕೃತ ಸ್ಥಿತಿಗೇರಿ ನಿಂತ ವ್ಯಕ್ತಿಯ ದಿವ್ಯ ವ್ಯಕ್ತಿತ್ವ ಮಾತಿನಲ್ಲಿ ಕೃತಿಯಲ್ಲಿ ಲೋಕಸಾಮಾನ್ಯ

5 ದೃಷ್ಟಾಂತವಾಗಿ ಪ್ರಭುಲಿಂಗಲೀಲೆಯಲ್ಲಿರುವ ಸಿದ್ಧರಾಮ ಜಡೆಗಣ್ಣುರಿಯನ್ನು ಪ್ರಭುದೇವರ ಮೇಲೆ ಉಪಯೋಗಿಸಿದುದನ್ನು ಜ್ಞಾಪಿಸಿಕೊಳ್ಳಬಹುದು.

ಮಾನವರಿಂದ ಪ್ರಕಟಿಸಲು ಸಾಧಕವಾದ ಶಕ್ತಿ ಪ್ರಕಟವಾಗುವುದು, ಅದು ಲೋಕಕ್ಕೆ ಪವಾಡವಾಗಿ ಕಾಣುವುದು. ಇವು ಅಣಿಮಾಮಹಿಮಾದಿ ಅಷ್ಟಸಿದ್ಧಿಗಳ ರೂಪದಲ್ಲಿ ಸಿದ್ಧ ಪುರುಷರ ಕೈವಶವಾಗಿರುತ್ತವೆಂದು ಯೋಗ ಶಾಸ್ತ್ರಗಳಲ್ಲಿ ಹೇಳಲಾಗುತ್ತಿದೆ. ಪವಾಡಗಳನ್ನು ವ್ಯಕ್ತಪಡಿಸುವುದು ಎಲ್ಲರಿಂದಲೂ ಸಾಧ್ಯವಿಲ್ಲ. ಶಿವಯೋಗ ಶಕ್ತಿ ಪಡೆದವರಿಂದ ಮಾತ್ರ ಸಾಧ್ಯವೆಂದು ಯೋಗಶಾಸ್ತ್ರದ ಮಾತುಗಳಿಂದ ನಮಗೆ ಗೊತ್ತಾಗುತ್ತದೆ. ಪಾತಂಜಲಿಯ ಯೋಗ ಶಾಸ್ತ್ರದಲ್ಲಿ—'ತ್ರಿಕರಣ ಶುದ್ಧವಾಗಿ ಸತ್ಯವನ್ನು ಅಭ್ಯಾಸ ಮಾಡಿದ ಯೋಗಿಗೆ ವಾಕ್ ಸಿದ್ಧಿಯುಂಟಾಗುವುದು.[6] ಅಂದರೆ ಅವನು ನುಡಿದ ನುಡಿಯಲ್ಲಿ ಶಾಪ ಮತ್ತು ಅನುಗ್ರಹಗಳೆರಡೂ ಉಂಟಾಗುವುದೆಂದೇ ಅರ್ಥ. ಹಿಂಸಾಸ್ವಭಾವವನ್ನೇ ನಷ್ಟಗೊಳಿಸಿಕೊಂಡ ಯೋಗಿಯ ಸನ್ನಿಧಿಯಲ್ಲಿ ಬದ್ಧ ವೈರವುಳ್ಳ ಪ್ರಾಣಿಗಳಲ್ಲೂ ಮೈತ್ರಿ ಉಂಟಾಗುವುದೆಂದೂ ಅಂಥ ಯೋಗಿಗೆ ಮೃಗಬಾಧಾ ನಿವಾರಣೆಯಾಗುವುದೆಂದೂ ಎಂಥ ಕ್ರೂರ ಮೃಗಗಳಾದರೂ ಹಿಂಸೆಗೊಳಿಸುವುದಿಲ್ಲವೆಂದೂ ಹೇಳಲಾಗುತ್ತಿದೆ.[7] ಅವರ ಮಾತನ್ನು ಅನುಸರಿಸಿ ಅರ್ಥವೇ ಹದುರಿಬರುತ್ತದೆಂದು ಅನೇಕ ಅನುಭವಗಳ ಅನುಭವವಾಗಿದೆ.[8] ಅಷ್ಟಾಂಗ ಯೋಗದ 'ಯಮ' ಎಂಬ ಮೊದಲನೆಯ ಅಂಗದಲ್ಲಿರುವ ಐದು ಗುಣಗಳಲ್ಲಿ ಮೊದಲನೆಯ ಅಹಿಂಸೆ–ಸತ್ಯವೆಂಬ ಗುಣಗಳನ್ನು ಅಭ್ಯಾಸ ಮಾಡಿದವನ ಸನ್ನಿಧಿಯಲ್ಲಿ ಇತರರು ವೈರಭಾವವನ್ನು ಬಿಡುವರೆಂದೂ, ಅವನಿಗೆ ಆಗಲೇ ಶಾಪಾನುಗ್ರಹ ಶಕ್ತಿ ಬರುವುದೆಂದೂ ಹೇಳಿದ ಮೇಲೆ ಸಂಪೂರ್ಣ ಯೋಗವು (ಅಷ್ಟ ಅಂಗಗಳಿಂದ ಕೂಡಿದ ಯೋಗವು ಸಿದ್ಧಿಸಿದರೆ ಅವನಲ್ಲಿ ಇನ್ನೆಂತಹ ಅದ್ಭುತ ಶಕ್ತಿಯುಂಟಾಗಲಿಕ್ಕಿಲ್ಲ. ಅದರಲ್ಲಿಯೂ ಶಿವಯೋಗಿಯಾದವನ ವಿಚಾರದಲ್ಲಿ ವಿವರಿಸುವುದಾದರೂ ಏನಿದೆ. ಪ್ರತ್ಯಕ್ಷ ಶಿವ ಸ್ವರೂಪವೇ ಆದ ಅವರಲ್ಲಿ ಶಿವಶಕ್ತಿ ಒಡಮೂಡಿರುತ್ತದೆ. ಇತ್ತೀಚಿನ ದಿನಗಳಲ್ಲಿ ಸತ್ಯ ಅಹಿಂಸೆಗಳನ್ನು ಜೀವನಕ್ಕೊಳಪಡಿಸಿಕೊಂಡಿದ್ದ ಗಾಂಧೀ, ಅರವಿಂದ ಘೋಷರೇ ಮೊದಲಾದವರಿಂದ ಎಂಥ ಅದ್ಭುತ ಘಟನೆಗಳ ನಡೆದಿಲ್ಲ? ಆದುದರಿಂದ ಶಿವಯೋಗದಲ್ಲಿ ಅದ್ಭುತ ಶಕ್ತಿ ಸಂಚಯನಗೊಳಿಸಿಕೊಂಡ ಶಿವಯೋಗಿಗಳ ಜೀವನದಲ್ಲಿಯೂ ಅದ್ಭುತಗಳು ನಡೆಯುತ್ತವೆ. ಆದರೆ ವೀತರಾಗ ಭಯ ಕ್ರೋಧ ವಿವರ್ಜಿತರಾದ ಅವರು ತಾವು ಕಷ್ಟ ಅನುಭವಿಸಿದರೂ ಇತರರಿಗೆ ಕೇಡು ಕಾಣುವ ಶಾಪಾದಿಗಳನ್ನು ಪ್ರಕಟಿಸುವುದಿಲ್ಲ. ಅನುಗ್ರಹವನ್ನು ಬೇಕಾದರೆ ಪ್ರಕಟಿಸಿಯಾರು. ಅವರೂ ಒಮ್ಮೊಮ್ಮೆ ಲೋಕಜೀವನವನ್ನು ತಿದ್ದಲು ಮೂರ್ಖರನ್ನು ದಾರಿಗೆ ತರಲು, ಇನ್ನಾವ ಉಪಾಯಗಳು ತೋರದಿದ್ದಾಗ ಶಾಪದ ಮೂಲಕ ಸರಿಪಡಿಸುವುದೂ ಉಂಟು. ಈ ಕಾರಣದಿಂದ ನಷ್ಟವಾದ ತಮ್ಮ ಶಕ್ತಿಯನ್ನು ಪುನಃ ಅವರು ಸಂಪಾದಿಸಿ ಸರಿದೂಗಿಸಿಕೊಳ್ಳುತ್ತಾರೆ. 'ಶಾಪಾದಪಿ ಶರಾದಪಿ' ಎಂಬ ಮಾತನಿಲ್ಲಿ ಸ್ಮರಿಸಬಹುದು. ಶಾಪದಿಂದಲಾದರೂ ಶರದಿಂದಲಾದರೂ ಲೌಕಿಕ ದೌಷ್ಟ್ಯವನ್ನು ಹಾಳುಮಾಡಿ ಸದ್ಧರ್ಮಸ್ಥಾಪನೆ ಮಾಡಲು ಮಹಾತ್ಮರು ಆಗಾಗ ಯತ್ನಿಸುತ್ತಾರೆ.

( ಮುಂದುವರಿಯುವುದು )

6 'ಸತ್ಯಪ್ರತಿಷ್ಠಾಯಾಂ ಕ್ರಿಯಾಫಲಾಶ್ರಯತ್ವಂ'. ( ಪಾದ 2, ಸೂತ್ರ 36 )
7 'ಅಹಿಂಸಾಪ್ರತಿಷ್ಠಾಯಾಂ ತತ್ ಸನ್ನಿಧೌ ವೈರತ್ಯಾಗಃ ( ಪಾದ 2, ಸೂತ್ರ 35 )
8 ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋನುಧಾವತಿ ।
ಲೌಕಿಕಾನಾಂಹಿ ಸಾಧೂನಾಂ ಅರ್ಥಂವಾಗನುವರ್ತತೇ ॥ (-ಭವಭೂತಿಯ ಉತ್ತರ ರಾಮಚರಿತ್ರೆಯ ನಾಟಕ)

ಆವನಾದರೇನು ಶ್ರೀ ಮಹಾದೇವನ ನೆನೆವವನ
ಬಾಯತಂಬುಲವ ಮೆಲುವೆ, ಬೀಳುಡಿಗೆಯ ಹೊದೆವೆ
ಪಾದರಕ್ಷೆಯ ಕಾಯ್ದು ಬದುಕುವೆ
ಕೂಡಲ ಸಂಗಮದೇವಾ

—ಬಸವಣ್ಣ

# ಸಾಮಾಜಿಕ ಜೀವನದ ಶತ್ರುಗಳು: ಅಸಡ್ಡೆ ಮತ್ತು ಅಜಾಗ್ರತೆ

—ಬಿ. ಸುಬ್ರಾಯ ಅಡಿಗ

ಹೆಚ್ಚಿನ ಜನ ಇತರರ ಮಾತುಗಳನ್ನು ಗಮನಿಸುವುದಿಲ್ಲ. ಯುವಕರಲ್ಲಿ ಈ ದೋಷ ಅತ್ಯಧಿಕವಾಗಿದೆ. ಕೆಲವೊಮ್ಮೆ ಇದು ಪ್ರಾಣಾಪಾಯವನ್ನು ತಂದೊಡ್ಡುವುದು. ಅಜಾಗ್ರತೆಯಿಂದಾಗಿಯೇ ಎಷ್ಟೋ ಜನ ಸರ್ವನಾಶಕ್ಕೊಳಗಾಗುವರು.

ಬೇಸಗೆಯ ದಿನಗಳವು. ರಾತ್ರಿ ವೇಳೆ ನಾನು ರೈಲಿನಿಂದ ಮನೆಗೆ ಮರಳುತ್ತಿದ್ದೆ. ಗಾಡಿಯ ವೇಗ ಹೆಚ್ಚಾಗಿತ್ತು. ಬಾಗಿಲಬಳಿ ತರುಣನೊಬ್ಬ ನಿಂತಿದ್ದ. ಆತ ಒಮ್ಮೆ ತನ್ನ ಕಾಲನ್ನೂ ಮತ್ತೊಮ್ಮೆ ಕೈಯನ್ನೂ ಹೊರಚಾಚುತ್ತಿದ್ದ. 'ದೇಹದ ಯಾವ ಅಂಗವನ್ನೂ ಹೊರಹಾಕಬೇಡ ಯಾವುದಾದರೂ ವಸ್ತುವಿಗೆ ಢಿಕ್ಕಿಹೊಡೆದರೆ ಗಂಡಾಂತರ ಕ್ಕೀಡಾಗುವಿ'—ಎಂದು ನಾನು ಅವನನ್ನೆಚ್ಚರಿಸಿದೆ. 'ಹೀಗೆ ತಣ್ಣಗಿದೆ....ತುಂಬಾ ಹಿತವೆನಿಸುತ್ತದೆ'–ಎಂದು ನನ್ನ ಮಾತನ್ನು ಕಡೆಗಣಿಸಿಬಿಟ್ಟ.

ತುಸು ಹೊತ್ತಿನಲ್ಲೇ 'ಕಟಕ್' ಎಂಬ ಸದ್ದಾಯಿತು. ಆ ಯುವಕನ ಕಾಲು ಯಾವುದೋ ವಸ್ತುವಿಗೆ ಢಿಕ್ಕಿ ಹೊಡೆದು ಕತ್ತರಿಸಿಹೋಗಿತ್ತು. ಆತ ನಿಂತಲ್ಲೇ ಎಚ್ಚರತಪ್ಪಿ ಬಿದ್ದುಬಿಟ್ಟ. ಜನ ಅವನನ್ನು ಹಿಡಿದುಕೊಂಡರು. ಸರಪಳಿ ಎಳೆಯಲಾಯಿತು, ಗಾಡಿ ನಿಂತಿತು; ಸಿಗ್ನಲ್‌ಗೆ ಢಿಕ್ಕಿಹೊಡೆದು ಅವನ ಕಾಲು ಮುರಿಯಿತೆಂದು ತಿಳಿದುಬಂತು. ಅವನ ಆ ಕಾಲನ್ನು ಎತ್ತಿಕೊಂಡು ಅವನನ್ನು ಆಸ್ಪತ್ರೆಗೊಯ್ಯಲಾಯಿತು. ಡಾಕ್ಟರರ ಪ್ರಯತ್ನದಿಂದ ಅವನ ಜೀವವೇನೋ ಉಳಿದರೂ ಕಾಲು ಮಾತ್ರ ಸೇರದಾಯಿತು.

ಅರಿವಿಲ್ಲದ ಮಕ್ಕಳಷ್ಟೇ ಅಲ್ಲ-ತಿಳಿವಳಿಕೆಯುಳ್ಳ ಹಿರಿಯರೂ ವಿದ್ಯುತ್ ಕಂಬಕ್ಕೆ ಒರಗಿ ನಿಲ್ಲುವುದನ್ನು ಕಾಣುತ್ತೇವೆ. ಕಬ್ಬಿಣದ ಆ ಕಂಬದಲ್ಲಿ ಅಕಸ್ಮಾತ್ ಕರೆಂಟ್ ಹರಿಯುವ ಅಪಾಯವಿರುತ್ತದೆ. ಮಳೆಗಾಲದಲ್ಲಂತೂ ಗಂಡಾಂತರ ಅತಿ ಹೆಚ್ಚು. ಆದರೆ ನಾವು ನಮ್ಮ ಅಭ್ಯಾಸವನ್ನು ಬಿಡಲು ಸಿದ್ಧರಿಲ್ಲ.

ನಮ್ಮೂರಿನ ಪಾರ್ಕ್ ತುಂಬ ಹಳೆಯದು. ನೋಡಲು ಸುಂದರವಾಗಿದ್ದರೂ ಹಳೆಯ ಕಬ್ಬಿಣದ ಕಂಬಗಳಲ್ಲೇ ವಿದ್ಯುದ್ದೀಪದ ಏರ್ಪಾಡಿದೆ. ಒಂದು ದಿನ ಬೆಳಿಗ್ಗೆ ಒಬ್ಬ ಮನುಷ್ಯ ಒಂದು ಕಂಬಕ್ಕೊರಗಿ ನಿಂತುದನ್ನು ಜನ ಕಂಡರು. ಆತ ಒಂದಿಷ್ಟೂ ಅಲುಗಾಡುತ್ತಿರಲಿಲ್ಲ, ಹತ್ತಿರ ಹೋಗಿ ಪರೀಕ್ಷಿಸಿದ ಮನುಷ್ಯ ತುಸು ವಿವೇಕಿಯಿದ್ದ, ಎಂತಲೇ ಅವಿಚಾರದಿಂದ ಅವನ ಕೈಹಿಡಿದು ನೋಡಲಿಲ್ಲ. ಇಲ್ಲದಿದ್ದರೆ ಅವನಿಗೂ ಕರೆಂಟ್ ಬಡಿಯುತ್ತಿತ್ತು. ಆ ಬಡಪಾಯಿ ಮನುಷ್ಯ ಕಂಬದ ಕರೆಂಟಿನಿಂದಲೇ ರಾತ್ರಿ ಸತ್ತುಹೋಗಿದ್ದ.

ಕೆಲ ದಿನಗಳ ಹಿಂದಿನ ಸಂಗತಿ. ನಾನು ಪೇಟೆಯಲ್ಲಿ ಸಾಗುತ್ತಿದ್ದೆ, ತುಂಬ ಜನಸಂದಣಿಯ ಪ್ರದೇಶವದು, ನನ್ನ ಮುಂದೆ ಮುಂದೆ ಕೆಲ ಮಹಿಳೆಯರು ಸಾಗುತ್ತಿದ್ದರು. ಅವರ ಜೊತೆ ಕೆಲ ಮಕ್ಕಳೂ ಇದ್ದರು. ಅವರು ಹಾಡುತ್ತ ಕುಣಿಯುತ್ತ ರಸ್ತೆಯುದ್ದಕ್ಕೂ ಸಾಗುತ್ತಿದ್ದರು. ಮಕ್ಕಳ ಕೈಹಿಡಿದು ಸಾಗುವಂತೆ ಒಬ್ಬರು ಆ ಹೆಂಗಸರಿಗೆ ಸಲಹೆಯಿತ್ತರು. ಕಾರು, ಸೈಕಲ್, ಟ್ರಕ್ ಮೊದಲಾದವು ಬರುತ್ತಿರುವುದರಿಂದ ಅಪಾಯ ಒದಗುವ ಸಂಭವವಿದೆಯೆಂದೂ ಹೇಳಿದರು. ಆದರೆ ಹೆಂಗಸರು ಅವರ ಮಾತಿಗೆ ಕಿವಿಗೊಡಲಿಲ್ಲ. 'ಮಕ್ಕಳೆ....ಬದಿಯಲ್ಲಿ' ಹೋಗಿರಿ!'—ಎಂದಿಷ್ಟೇ ಹೇಳಿ ಸುಮ್ಮನಾದರು. ಆದರೆ ಮಕ್ಕಳು ಒಪ್ಪುವುದುಂಟೆ? ಅವರು ತಮ್ಮ ರೀತಿಯಲ್ಲೇ ಸಾಗಿದರು. ಆಗಲೇ ನಾಯಿಯೊಂದು ಒಬ್ಬ ಹುಡುಗನನ್ನು ಕಂಡು ಬೊಗಳಿತು. ಹುಡುಗ ಹೆದರಿ ಓಡಿದಾಗ ಎದುರಿನಿಂದ ಬರುತ್ತಿದ್ದ ಸೈಕಲ್ ಅವನಿಗೆ ಢಿಕ್ಕಿ ಹೊಡೆಯಿತು. ಅವನ ಒಂದು ಕಣ್ಣಿಗೆ ಪೆಟ್ಟಾಯಿತು. ತಾಯಿ ಸೈಕಲ್ ಸವಾರನನ್ನು ಬಯ್ಯತೊಡಗಿದಳು.

ಆಗ ಆ ಮಹಾಶಯರೇ ಇಂತೆಂದರು—"ಮಗುವಿನ ಕೈಹಿಡಿದು ಸಾಗುವಂತೆ ನಾನು ಮೊದಲೇ ಹೇಳಿದ್ದೆ. ಆದರೆ ನೀವು ನನ್ನ ಮಾತಿಗೆ ಕಿವಿಗೊಡಲಿಲ್ಲ. ರಸ್ತೆಯ ಮೇಲೆ ಮನಬಂದಂತೆ ನಡೆಯಲು ಬಿಡುವ ನೀವೇ ತಪ್ಪುಗಾರರು. ಇದು ಸೈಕಲ್ ಆಗಿತ್ತು, ಕಾರ್ ಆಗಿದ್ದರೆ ಹುಡುಗನ ಆಟ ಮುಗಿದೇ ಹೋಗುತ್ತಿತ್ತು."

ನಮ್ಮ ಕೇರಿಯ ಕೆಲ ಹುಡುಗರಿಗೆ ಈಜುವ ಉತ್ಸಾಹ ಉಂಟಾಯಿತು. ಅವರು ಮನೆಯಲ್ಲಿ ತಿಳಿಸದೆ ಈಜುಕೊಳಕ್ಕೆ ಹೋದರು. ಆದರೆ ಅಲ್ಲಿ ಕಾವಲುಗಾರನ ವ್ಯವಸ್ಥೆಯಿತ್ತು. ಹಣವಿಲ್ಲದೆ ಅವರು ಈಸುವಂತಿರಲಿಲ್ಲ. ಈಗ ಅವರಲ್ಲಿ ಪರಸ್ಪರ ವಿಚಾರವಿನಿಮಯ ನಡೆಯಿತು. ಮರುದಿನ ನದಿಗೆ ಹೋಗಿ ಈಸಲು ನಿರ್ಧರಿಸಿದರು. ಆ ಹುಡುಗರಲ್ಲೊಬ್ಬನು ನದಿಯ ಹೆಸರು ಕೇಳಿಯೇ ಹೆದರಿದ. ಮನೆಗೆ ಹೋಗಿ ಈ ಯೋಜನೆಯನ್ನು ತಂದೆ-ತಾಯಿಗೆ ತಿಳಿಸಿದ. ಅವರು ಅಕ್ಕಪಕ್ಕದ ಹುಡುಗರ ತಾಯಿತಂದೆಗಳಿಗೆ ಅವರ ಮಕ್ಕಳ ಯೋಜನೆಯ ಬಗ್ಗೆ ತಿಳಿಸಿದರು. ಎಲ್ಲರೂ ಮಕ್ಕಳನ್ನು ಗದರಿಸಿದರು. ಏಕೆಂದರೆ ಯಾರಿಗೂ ಈಸು ಬರುತ್ತಿರಲಿಲ್ಲ.

ಆದರೆ ದೂರು ನೀಡಿದ್ದ ಹುಡುಗನೊಬ್ಬನನ್ನು ಬಿಟ್ಟು ಉಳಿದೆಲ್ಲರೂ ಮರುದಿನ ಹೊಳೆಗೆ ಹೋದರು. ಮೊಣಕಾಲು ನೀರಿನಲ್ಲಿ ನಿಂತು ಆಡತೊಡಗಿದರು. ಉತ್ಸಾಹದಿಂದ ಒಬ್ಬ ಹುಡುಗ ಆಳವಾದ ನೀರಿಗೆಹೋದ. ಈಜು ಬರದುದರಿಂದ ಮುಳುಗಿ ಹೋದ. ಇದನ್ನು ಕಂಡು ಉಳಿದವರು ಜೋರಾಗಿ ಅಳತೊಡಗಿದರು. ಸುದೈವದಿಂದ ಅಲ್ಲೇ ಸ್ನಾನಮಾಡುತ್ತಿದ್ದವರೊಬ್ಬರು, ಆ ಹುಡುಗನನ್ನು ಮೇಲೆ ತಂದರು. ಹುಡುಗನ ಹೊಟ್ಟೆಯಲ್ಲಿ ತುಂಬಿದ್ದ ನೀರನ್ನು ಹೊರತೆಗೆಯಲಾಯಿತು. ತಕ್ಷಣ ಆಸ್ಪತ್ರೆಗೊಯ್ದುದರಿಂದ ಅವನ ಜೀವ ಉಳಿಯಿತು.

ಒಳ್ಳೇ ಅನುಭವಿಗಳೂ ರಸ್ತೆಯ ಮೇಲೆ ಕುರುಡರಂತೆ ನಡೆಯುತ್ತಾರೆ. ಎದುರಿಗೇನು ಬರುತ್ತಿದೆಯೆಂದಾಗಲೀ ನೆಲದ ಮೇಲೆ ಏನಿದೆಯೆಂದಾಗಲೀ ಅವರು ನೋಡುವುದಿಲ್ಲ. ಎಮ್ಮೆ ಹೋದಂತೆ ಠೀವಿಯಿಂದ ಸಾಗುತ್ತಾರೆ. ದಾರಿಯಲ್ಲಿ ಗಾಜು, ಮೊಳೆ ಇಲ್ಲವೇ ಬೇರೇ ಯಾವ ವಸ್ತು ಬಿದ್ದಿದ್ದರೆ ಅದು ಅವರ ಕಾಲಿಗೆ ಚುಚ್ಚಬಹುದು. ಬಾಳೆಹಣ್ಣಿನ ಸಿಪ್ಪೆಯ ಮೇಲೆ ಕಾಲಿಟ್ಟು ಬೀಳಬಹುದು....ಎಂದು ಮುಂತಾಗಿ ಏನನ್ನೂ ಯೋಚಿಸುವುದಿಲ್ಲ. ಈ ಅಜಾಗ್ರತೆಯಿಂದಾಗಿಯೇ ಎಷ್ಟೋ ಜನ ಎದುರಿನ ವಾಹನಕ್ಕೆ ಢಿಕ್ಕಿ ಹೊಡೆಯುತ್ತಾರೆ. ಸಣ್ಣ ಅಜಾಗ್ರತೆ ದೊಡ್ಡ ಗಂಡಾಂತರಕ್ಕೆ ಕಾರಣವಾಗಬಲ್ಲುದು.

ಒಬ್ಬರು ರೈಲ್ವೇಲೈನ್ ದಾಟುತ್ತಿದ್ದರು. ಕಾಲುಗಳಲ್ಲಿ ಚಪ್ಪಲಿಯಿತ್ತು. ಆದರೆ ಕಂಬಿಗೆ ಢಿಕ್ಕಿಹೊಡೆದು ಅವರ ಕಾಲಿನ ಹೆಬ್ಬೆರಳಿಗೆ ಪೆಟ್ಟಾಯಿತು. ಒಂದಿಷ್ಟು ರಕ್ತವೂ ಬಂತು. ಸಣ್ಣ ಪೆಟ್ಟು, ಸುಮ್ಮನೆ ಸರಿಹೋಗುವುದು—ಎಂದು ಅದನ್ನು ಅಲಕ್ಷಿಸಿದರು. ಹೀಗಾಗಿ ಆಸ್ಪತ್ರೆಗೂ ಹೋಗಲಿಲ್ಲ.

ಆದರೆ ರೈಲುಕಂಬಿಗೆ ತುಕ್ಕು ಹಿಡಿದಿತ್ತು. ಅದು ತನ್ನ ಪ್ರಭಾವ ತೋರಿಸಿತು. ಅವರಿಗೆ ಭಯಂಕರ ಟಿಟನಿಸ್ (ಧನುರ್ವಾತ) ರೋಗ ತಗಲಿತು. ಡಾಕ್ಟರಿಗೆ ತೋರಿಸಿದರೂ ಫಲವಾಗಲಿಲ್ಲ, ಬಹಳಷ್ಟು ಪ್ರಯತ್ನಿಸಿದರೂ ಅವರು ಸಾವಿಗೀಡಾದರು.

ನನ್ನ ತಂಗಿ ಗೀತಾಳ ಮದುವೆಯಿತ್ತು. ಮನೆಯಲ್ಲಿ ಸ್ಥಳಾಭಾವವಿದ್ದುದರಿಂದ ಮದುವೆಗಾಗಿ ನಾವು ಒಂದು ಶಾಲೆಯನ್ನು ಬಳಸಿಕೊಂಡಿದ್ದೆವು. ಅದು ಮನೆಯ ಹತ್ತಿರವೇ ಇತ್ತು. ಹೀಗಾಗಿ ಸಂಬಂಧಿಕರು ಮನೆಯಿಂದ ಶಾಲೆಗೂ ಶಾಲೆಯಿಂದ ಮನೆಗೂ ಬಂದು ಹೋಗುತ್ತಿದ್ದರು. ಆದರೆ ಮನೆಯವರಾದ ನಾವು ಮಾತ್ರ ಶಾಲೆಯಲ್ಲೇ ಏರ್ಪಾಡು ಮಾಡಲು ಉಳಿದಿದ್ದೆವು. ಹೀಗಾಗಿ ಬೆಳಗ್ಗೆ ಮನೆಬಿಟ್ಟರೆ ಸಂಜೆಯಷ್ಟೇ ಮನೆಗೆ ಮರಳುತ್ತಿದ್ದೆವು. ದಿಬ್ಬಣ ಬರಲಿದ್ದ ದಿನ ನಾನು ಬೆಳಗ್ಗೆ ಸ್ನಾನ ಮಾಡಿ ಮನೆಯಿಂದ ಶಾಲೆಗೆ ಬಂದೆ. ನನ್ನ ರಿಸ್ಟವಾಚ್ ಮನೆಯ ತೆರೆದ ಕಪಾಟಿನಲ್ಲಿ ಉಳಿದಿದೆಯೆಂದು ಅಕಸ್ಮಾತ್ ನೆನಪಾಯಿತು. ನಾನು ತಮ್ಮನನ್ನು ಕರೆದು—'ತಕ್ಷಣ ಅದನ್ನು ತೆಗೆದು ಕಟ್ಟಿಕೊ....ಸಂಜೆ ನನಗೆ ಕೊಡು'—ಎಂದು ಹೇಳಿದೆ. 'ಆಗಲಿ'—ಎಂದನಾತ. ನಾನು ನಿಶ್ಚಿಂತನಾದೆ.

ಸಂಜೆ ಅವನನ್ನು ವಿಚಾರಿಸಿದಾಗ, ಆತ ಅಸಡ್ಡೆಯಿಂದ ಮರೆತೇಬಿಟ್ಟಿದ್ದ ಎಂದು ತಿಳಿಯಿತು. ಮನೆಗೆ ಹೋಗಿ ನೋಡಿದಾಗ ವಾಚ್ ಅಲ್ಲಿರಲಿಲ್ಲ. ಮದುವೆಯ ವೇಳೆ ಹಲವಾರು ಜನ ಬಂದು ಹೋಗುತ್ತಾರೆ. ಯಾರ ಮೇಲೆ ಸಂದೇಹಪಡಲು ಸಾಧ್ಯ? ತಮ್ಮನ ಅಸಡ್ಡೆಯಿಂದಾಗಿ ೩೫೦ ರೂಪಾಯಿ ನಷ್ಟವಾಯಿತು. ಮತ್ತೆ ಶಾಂತವಾಗಿ ಯೋಚಿಸಿದರೆ ತಪ್ಪು ಅವನದಲ್ಲ, ನನ್ನದೆಂದು ತಿಳಿಯುವುದು. ನಾನೇ ಎಚ್ಚರಿಕೆಯಿಂದ ಹೋಗಿ ತರಬೇಕಾಗಿತ್ತು.

ಆದದ್ದಾಯಿತು....ಇನ್ನು ಮುಂದಾದರೂ ಎಚ್ಚರವಾಗಿರುವೆನೆಂದು ಅಂದೇ ಪ್ರತಿಜ್ಞೆಮಾಡಿದೆ. ಈಗ ಇಂಥ ಸಂದರ್ಭ ಒದಗುತ್ತಿಲ್ಲ. ಇತರರ ಮಾತನ್ನು ವಿಚಾರಮಾಡದೆ ಅಲಕ್ಷಿಸುವ ದುರ್ಗುಣವೂ ನನ್ನಲ್ಲಿಲ್ಲ. ●

(ಹಿಂದಿಯಿಂದ)

# ರಾಷ್ಟ್ರದ ಇಂದಿನ ಸಮಸ್ಯೆಗಳ ಪರಿಹಾರಕ್ಕೆ ಶರಣರ ಆರ್ಥಿಕ ಚಿಂತನೆಗಳ ಕೊಡುಗೆ

—ವಿದ್ವಾನ್ ಕೆ. ಎಂ. ರೇವಣಸಿದ್ಧಯ್ಯ

ಒಂದು ದೇಶ ಅಭಿವೃದ್ಧಿಯನ್ನು ಹೊಂದಬೇಕಾದರೆ, ರಾಜಕೀಯ ಸ್ವಾತಂತ್ರ್ಯ ಅತ್ಯವಶ್ಯಕ. ಆದರೆ ಕೇವಲ ರಾಜಕೀಯ ಸ್ವಾತಂತ್ರ್ಯ ಒಂದರಿಂದಲೇ ದೇಶದ ಅಭ್ಯುದಯವನ್ನು ಸಾಧಿಸಲಾಗುವುದಿಲ್ಲ. ಸಂಪನ್ಮೂಲಗಳನ್ನು ರೂಢಿಸಿಕೊಂಡು ಆರ್ಥಿಕ ಸ್ವಾವಲಂಬನೆಯನ್ನು ಸಂಪಾದಿಸಿಕೊಳ್ಳದಿದ್ದರೆ ರಾಜಕೀಯ ಸ್ವಾತಂತ್ರ್ಯವನ್ನು ಕಳೆದುಕೊಂಡು ಪರಾಧೀನರಾಗಬೇಕಾಗುತ್ತದೆ. ಆರ್ಥಿಕ ಸ್ವಾವಲಂಬನೆಯಿಲ್ಲದ ಮಹತ್ತರವಾದ ಅಭಿವೃದ್ಧಿ ಕೆಲಸಗಳನ್ನುಮಾಡಿ ಜನತೆಗೆ ಸೌಕರ್ಯಗಳನ್ನು ಕಲ್ಪಿಸಿಕೊಡುವುದೂ ಸಾಧ್ಯವಾಗದ ಮಾತು. ಆದ್ದರಿಂದಲೇ ಹಿಂದಿನವರು ''ಸರ್ವೇ ಗುಣಾಃಕಾಂಚನಮಾಶ್ರಯಂತಿ" ಎಂದು ಹೇಳಿದ್ದು. ದೇಶವು ಆರ್ಥಿಕ ಸ್ವಾವಲಂಬನೆಯನ್ನು ಪಡೆಯಬೇಕಾದರೆ, ಆ ದೇಶದ ಪ್ರತಿಯೊಬ್ಬ ವ್ಯಕ್ತಿಯೂ ಕೂಡ ಸಮರ್ಥವಾದ ದುಡಿಮೆಯನ್ನು ಮಾಡಲೇಬೇಕು. ಅದರಲ್ಲೂ ಸಮತಾವಾದದ ಸಮಾಜ ನಿರ್ಮಾಣ ಮಾಡಿಕೊಳ್ಳುವ ಪಣತೊಟ್ಟಿರುವ ನಮ್ಮ ದೇಶದಲ್ಲಂತೂ, ಪ್ರತಿಯೊಬ್ಬವ್ಯಕ್ತಿಯ ಜವಾಬ್ದಾರಿಯೂ ಗುರುತರವಾದುದು. ಎಲ್ಲ ವ್ಯಕ್ತಿಗಳಿಗೂ ಎಲ್ಲದರಲ್ಲೂ ಸಮಾನತೆ ಸಂದಾಯವಾಗಬೇಕು. ಈ ವ್ಯವಸ್ಥೆಯಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಒಂದು ಘಟಕ. ಸಮಾಜ-ವ್ಯಕ್ತಿ ಪರಸ್ಪರಾವಲಂಬಿಗಳಷ್ಟೇ ಅಲ್ಲ. ಒಂದರ ಪುಷ್ಟಿಗೆ ಇನ್ನೊಂದರ ಶಕ್ತಿ ಪೂರಕವೂ ಅಹುದು. ವ್ಯಕ್ತಿಯೇ ಸಮಾಜವಾದ (ಸಮತಾವಾದಗಳ) ಬೆನ್ನೆಲುಬಾದರೆ ವ್ಯಕ್ತಿಯ ಶ್ರಮಪೂರ್ಣ ದುಡಿಮೆಯೇ ಅದರ ಶಕ್ತಿ. ಮೇಲು ಕೀಳು ಬಡವ ಬಲ್ಲಿದರೆಂಬ ವರ್ಗರಹಿತ ಸಮಾಜದ ಸೃಷ್ಟಿಯೇ ಇದರ ಗುರಿ. ರಾಷ್ಟ್ರದ ಸಂಪತ್ತು ಸಮಾನವಾಗಿ ಹಂಚಿಕೆಯಾಗಬೇಕು. ಯಾವ ವೃತ್ತಿಯವನೇ ಆಗಲಿ ಅವನು ಗೌರವಿಸಲ್ಪಡಬೇಕು. ವೃತ್ತಿ ಆಧಾರಿತ ಜಾತಿಮತಗಳ ನಿರ್ಮಾಣಕ್ಕವಕಾಶವಿರಬಾರದು ಎಂಬ ಮಹೋನ್ನತ ತತ್ವಗಳೇ ಸಮಾಜವಾದದ ಧ್ಯೇಯ.

ಆದರೆ ಇಂದಿನ ದೇಶದ ವಿದ್ಯಮಾನಗಳು ಇದಕ್ಕೆ ವ್ಯತಿರಿಕ್ತವಾಗಿ ಸಾಗುತ್ತಿವೆ. ಭಯಾನಕ ಸನ್ನಿವೇಶಗಳು ನಮ್ಮ ಮುಂದಿವೆ. ನಮ್ಮ ಆರ್ಥಿಕ ವ್ಯವಸ್ಥೆಯೇ ಕುಸಿಯುತ್ತಿದೆ. ಉತ್ಪಾದನೆಯ ಹಿಂಜರಿತ ನಿರುದ್ಯೋಗ ಸಮಸ್ಯೆ ಬೃಹತ್ತಾಗಿ ಬೆಳೆಯುತ್ತಿದೆ. ಹಣದುಬ್ಬರ, ಭ್ರಷ್ಟಾಚಾರ, ಬೆಲೆಏರಿಕೆ, ಅಗತ್ಯವಸ್ತುಗಳ ಅಭಾವ ಮುಂತಾದ ಸುಂಟರಗಾಳಿಯಲ್ಲಿ ಸಿಲುಕಿ ಸಾಮಾನ್ಯ ಜನತೆ ದಿಗ್ಭ್ರಾಂತವಾಗಿದೆ. ವ್ಯಕ್ತಿಯಲ್ಲಿ ವೃತ್ತಿಗೌರವ ಮಾಯವಾಗಿ, ಅರ್ಪಣಾ ಮನೋಭಾವದ ಶ್ರದ್ಧಾಪೂರ್ವಕ ದುಡಿಮೆಯ ಅಭಾವದಿಂದಾಗಿ ನಿರೀಕ್ಷಿಸಿದ ಮಟ್ಟದಲ್ಲಿ ಉತ್ಪನ್ನವಾಗುತ್ತಿಲ್ಲ. ಆ ಕಾರಣ ಸಂಪತ್ತಿನ ಗಳಿಕೆಯಲ್ಲಿ ಕುಸಿತ ಆದರೆ ಸೌಕರ್ಯಗಳು ಇನ್ನಷ್ಟು ಬೇಕೆನ್ನುವ ದುಡಿಮೆಗಾರರ ಬಯಕೆಗಳಲ್ಲಿ ಮಾತ್ರ ಕುಸಿತವಿಲ್ಲ. ಅದು ಏರುತ್ತಲೇ ಇದೆ. ''ಪುಣ್ಯಸ್ಯ ಫಲಮಿಚ್ಛಂತಿ ಮಾನವಾಃ'' ಎಂದಹಾಗೆ, ಕೆಲಸದ ದುಡಿಮೆ ಬೇಕಿಲ್ಲ. ದುಡಿಮೆಯ ಫಲಮಾತ್ರ ಸಂಪೂರ್ಣವಾಗಿ ಬೇಕು. ಎಲ್ಲರಿಗೂ ಬೇಕು, ಉತ್ಪನ್ನವಾದ ವಸ್ತುಗಳಲ್ಲಿ ಹಿತಮಿತವಾದ ಸುವ್ಯವಸ್ಥಿತ ವಿತರಣೆಯಿಲ್ಲ. ಒಂದು ತುತ್ತಿಗಾಗಿ ಎಂಜಲೆಲೆಯನ್ನು ನೆಕ್ಕುವ ಜನರೂ ಇದ್ದಾರೆ, ಇತಿಮಿತಿಯಿಲ್ಲದೆ ತಿಂದು ತೇಗಿ ಬಿಸಾಡುವ ಜನರೂ ಇದ್ದಾರೆ ನಮ್ಮೀ ಸಮಾಜದಲ್ಲಿ. ರಾಷ್ಟ್ರದಲ್ಲಿ ಉತ್ಪನ್ನವಾಗುವ ಧಾನ್ಯದ 1/20 ಭಾಗ ಇಲಿ ಹೆಗ್ಗಣ ಮತ್ತು ಸರಕು ಸಾಗಾಣಿಕೆಯ ಸಮಯದಲ್ಲಿ ಹಾಳಾಗುತ್ತಿದೆಯಂತೆ. ಅಂತೂ ಒಂದು ಕಡೆ ಬಡತನ ಅವ್ಯಾಹತವಾಗಿ ಬೆಳೆಯುತ್ತಿದ್ದರೆ, ಇನ್ನೊಂದು ಕಡೆ ಸಿರಿವಂತಿಕೆಯೂ ಉಳಿದು ಬರುತ್ತಿದೆ. ಇದು ನಮ್ಮ ಸಮಾಜವಾದದ ವೈಫಲ್ಯತೆಯ ಸೂಚನೆಯಲ್ಲದೆ ಮತ್ತೇನು? ಇದೆಲ್ಲಾ ಸಮಸ್ಯೆಗಳನ್ನೂ ಬಗೆಹರಿಸುತ್ತೇವೆಂದೂ ಬಡತನವನ್ನು ನಿರ್ಮೂಲಮಾಡುತ್ತೇವೆಂದೂ ಹೇಳಿಕೊಳ್ಳುತ್ತಾ ನಮ್ಮನ್ನಾಳುತ್ತಿರುವ ನಾಯಕರಲ್ಲಿ ಹೆಚ್ಚಿನ ಜನರ ಕೈ, ಬಾಯಿ, ಚಾರಿತ್ರ್ಯ ಮುಂತಾದವುಗಳೊಂದು ಸ್ವಚ್ಛವಾಗಿಲ್ಲ, ಎಲ್ಲವೂ ಕೊಳಕಿನಮಯ. ಜನತೆಯ ಬಡತನ ನಿರ್ಮೂಲನವೇ ನಮ್ಮ ಪವಿತ್ರ ಕಾಯಕವೆಂದು

ಹೇಳಿಕೊಳ್ಳುತ್ತಾ ತಮ್ಮ ಮತ್ತು ತಮ್ಮ ಆಪ್ತೇಷ್ಟರ ಬಡತನವನ್ನು ಮಾತ್ರ ನಿರ್ಮೂಲ ಮಾಡಿಕೊಳ್ಳುತ್ತಿದ್ದಾರೆ. ಪ್ರಜಾಪ್ರಭುತ್ವವನ್ನು ರಕ್ಷಿಸುವ ಅಧ್ವರ್ಯುಗಳು ತಾವೆಂದು ಸಾರಿಕೊಳ್ಳುತ್ತಾ ಪ್ರಜಾಪ್ರಭುತ್ವದ ಸಾರಸರ್ವಸ್ವವಾದ "ಚುನಾವಣೆಗಳನ್ನು" ಲಂಚರುಷುವತ್ತುಗಳಿಂದ ದುರ್ಗಂಧ ಪೂರಿತ ತಿಪ್ಪೆಗುಂಡಿಗಳನ್ನಾಗಿ ಪರಿವರ್ತಿಸುತ್ತಿದ್ದಾರೆ. ಸೇವಾಧರ್ಮದ ಘನನಡತೆಯನ್ನಾಗಲೀ ಕಾಯಕತತ್ವದ ಮಹತ್ತನ್ನಾಗಲೀ ತಿಳಿಯದ ವಿಷಯ ಲಂಪಟರ ರಾಜ್ಯಭಾರದಿಂದ ಇಂದು ನಮ್ಮ ಸಮಸ್ಯೆಗಳು ಭಯಂಕರವಾಗುತ್ತಿವೆ.

ಈ ಮೇಲಿನ ಎಲ್ಲಾ ಜ್ವಲಂತ ಸಮಸ್ಯೆಗಳನ್ನು ಬಗೆಹರಿಸಬಹುದು, ಶರಣರು ಯೋಜಿಸಿದ ಆರ್ಥಿಕ ಚಿಂತನೆಗಳ ಅನುಷ್ಠಾನ ಮಾಡುವುದರಿಂದ. ಅಷ್ಟೇ ಅಲ್ಲ ನಾವು ಸ್ಥಾಪಿಸಬೇಕೆಂದಿರುವ ಸಮತಾವಾದ ಸಮಾಜವನ್ನೂ ಸುಗಮವಾಗಿ ಸಾಧಿಸಬಹುದು. ಶರಣರ ಚಿಂತನೆಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವುದರಿಂದ. ಬಹುಷಃ ವಿಶ್ವದ ಇತಿಹಾಸದಲ್ಲಿಯೇ ಪ್ರಪ್ರಥಮವಾಗಿ ಸಮತಾವಾದ ಸಮಾಜ ನಿರ್ಮಾಣದ ತತ್ವಗಳನ್ನು ನಿರೂಪಿಸಿ ಸಾಧಿಸಿ ತೋರಿಸಿದವರು ಹನ್ನೆರಡನೆ ಶತಮಾನದ ಶರಣರೆಂದರೆ ಅತಿಶಯೋಕ್ತಿಯಾಗಲಾರದು.

ಶ್ರಮದುಡಿಮೆಯೇ ಸಮಾಜವಾದದ ಮೂಲ ತತ್ವ ಹಾಗೂ ಅದರ ಜೀವಾಳ. ಸಮಾಜದ ಭದ್ರತೆಗೆ ವ್ಯಕ್ತಿಯ ಭದ್ರತೆಯೇ ಅಡಿಪಾಯ. ವ್ಯಕ್ತಿಯ ಸುಸ್ಥಿತಿಗೆ ವ್ಯಕ್ತಿಯ ಶ್ರದ್ಧಾಪೂರ್ವಕ ಅರ್ಪಣಾ ಮನೋಭಾವದ ದುಡಿಮೆಯೇ ಸೋಪಾನ. ಅರ್ಪಣಾ ಮನೋಭಾವದ ಶ್ರದ್ಧಾಪೂರ್ವಕ ದುಡಿಮೆಯನ್ನು ಶರಣರು ಕಾಯಕವೆಂದು ಕರೆದರು. ಅದು ಸತ್ಯ ಶುದ್ಧವಾಗಿರಬೇಕು. ಅಂದರೆ ತನ್ನ ಕಾಯಕ ಅದು ಕೃಷಿಕರ್ಮವಾಗಲೀ, ವಾಣಿಜ್ಯವಾಗಲಿ, ರಾಜಕಾರಣವಾಗಲೀ, ಕಸುಬುಗಳಾಗಲೀ ಅಥವಾ ಸರ್ಕಾರದ ಉದ್ಯೋಗವಾಗಲೀ, ಅದರಿಂದ ಇನ್ನೊಬ್ಬರಿಗೆ ತೊಂದರೆಯಾಗಬಾರದು. ಆ ಕಾಯಕದ ಮುಖ ಬೆಲೆಯೆಷ್ಟೋ ಅದಷ್ಟನ್ನು ಮಾತ್ರ ಅದರ ಕೂಲಿಯಾಗಿ ಸ್ವೀಕರಿಸಬೇಕು. ಒಂದು ಹಣದ ಕಾಯಕ ಮಾಡಿ ಎರಡಾಗಲೀ ಅದಕ್ಕಿಂತ ನಿುಗಿಲಾದ ಹಣವಾಗಲೀ ಪಡೆಯುವುದು ಮಹಾಪಾಪ. ಅದು ಸತ್ಯಶುದ್ಧ ಕಾಯಕವಾಗಲಾರದು. ಕಾಯಕದಲ್ಲಿ ನಿರತನಾದರೆ ಏನೇ ಕಷ್ಟಬರಲಿ, ಸುಖಬರಲಿ, ಅದನ್ನು ಸಂಪೂರ್ಣಮಾಡದೆ ಅರ್ಧಕ್ಕೇ ಬಿಡಬಾರದು. ಇದು ಕಾಯಕತತ್ವ. ಆಯ್ದಕ್ಕಿ ಮಾರಯ್ಯನವರು ಹೇಳುವ "ಕಾಯಕ" ದಲ್ಲಿ ನಿರತನಾದರೆ, ಗುರುದರುಶನವಾದರೂ ಮರೆಯಬೇಕು ಲಿಂಗ ಪೂಜೆಯಾದರೂ ಮರೆಯಬೇಕು. ಜಂಗಮ ಮುಂದಿದ್ದರೂ ಹಂಗು ಹರಿಯಬೇಕು, "ಕಾಯಕವೇ ಕೈಲಾಸ" ವಾದ ಕಾರಣ ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು" ಎನ್ನುವ ವಚನದಲ್ಲಿ ಕಾಯಕ ಮಾಡುವ ರೀತಿ ಕಾಯಕದ ಮಹತ್ವ ನಿರೂಪಿತವಾಗಿದೆ. ಕಾಯಕವೇ ಕೈಲಾಸ. ಅಂದರೆ ಸತ್ಯ ಶುದ್ಧವಾದ ದುಡಿಮೆಯೇ ದೇವರು. ಎನ್ನುವ ಭಾವನೆ ವ್ಯಕ್ತವಾಗುತ್ತದೆ. ದುಡಿಮೆಯು ಶರಣರ ಆರ್ಥಿಕ ಚಿಂತನೆಯ ಮೂಲತತ್ವ. ಕೈ ದುಡಿಯಬೇಕು. ಕಾಲು ದುಡಿಯಬೇಕು. ಮೈ ದಂಡಿಸಿ ದುಡಿಯಬೇಕು. ಪಂಚೇಂದ್ರಿಯಗಳೆಲ್ಲವೂ ದುಡಿಮೆಯಲ್ಲಿ ತಲ್ಲೀನವಾಗಿರಬೇಕು. ಆ ರೀತಿ ಮಾಡಿದ ಕೆಲಸವೇ ಕಾಯಕ. ಅದುವೇ ಸತ್ಯ ಶುದ್ಧಕಾಯಕ. ನಿತ್ಯ ಶುದ್ಧವಾದ ಕಾಯಕವೂ ಆಗಿರಬಲ್ಲುದು. ಇಂತಹ ಕಾಯಕದ ಸಾಕ್ಷಾತ್ಕಾರವೇ ಪರಮಾತ್ಮನ ಸಾಕ್ಷಾತ್ಕಾರ.

ಕೇವಲ ದರಿದ್ರರು ಮಾತ್ರ ಕಾಯಕ ಮಾಡಬೇಕು. ಆವಶ್ಯಕತೆ ಇರುವವರು ಮಾತ್ರ ಕಾಯಕ ಮಾಡಬೇಕು. ಸಿರಿವಂತರು ಮಾಡಬಾರದು ಎಂದಲ್ಲ. ಕಾಯವಿರುವವರೆಲ್ಲ ಕಾಯಕಮಾಡಲೇ ಬೇಕು. ಕಾಯದ ಹಂಗು ಕಾಯಕದಿಂದಲೇ ತೀರಬೇಕು. "ಗುರುವಾದರೂ ಕಾಯಕದಿಂದಲೇ ಶಿಲೆಯ ಕುರುಹು ಹರಿವುದು. ಜಂಗಮವಾದರೂ ಕಾಯಕದಿಂದಲೇ ವೇಷ ಪಾಶ ಹರಿವುದು. ಇದು ಚನ್ನಬಸವಣ್ಣ ಪ್ರಿಯ ಚಂದೇಶ್ವರಲಿಂಗದ ಅರಿವು" ಎಂದ ಶರಣ ದರಸಯ್ಯನವರ ವಚನ, ಕಾಯಕದ ಮಹತ್ವವನ್ನು ಪ್ರತಿಪಾದಿಸುತ್ತದೆ. ಹೆಚ್ಚಾಗಿ ಲಾಭ ಸಂಪಾದಿಸಿ ಧನಸಂಗ್ರಹ ಮಾಡುವುದಕ್ಕೆ ಕಾಯಕ ಮಾಡಬಾರದು. ನ್ಯಾಯವಾದ ಬೆಲೆಗಿಂತ ಹೆಚ್ಚಾಗಿ ತೆಗೆದುಕೊಂಡರೆ ಮಹಾಪಾಪ. ಸುಲಿಯ ಚಂದಯ್ಯನ "ಸತ್ಯ ಶುದ್ಧ ಕಾಯಕದಲ್ಲಿ ಬಂದ ದ್ರವ್ಯದಲ್ಲಿ ಚಿತ್ತವಿಚ್ಛಂದವಾಗದಿರಬೇಕು. ನೇಮದ ಕೂಲಿಯಿಂದಿನ ನಿತ್ಯ ನೇಮದಲ್ಲಿ ಸಂದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸಗೆ

ದಾಸೆಗೆ ಕಾಮಿಸಿ ದ್ರವ್ಯವ ಹಿಡಿದರೆ, ತಾಮಾಡುವ ಸೇವೆ ನಷ್ಟವಯ್ಯ ? ಎಂಬ ನುಡಿಗಳಲ್ಲಿ ಪ್ರತಿಪಾದಿತವಾದ ತತ್ವ ಕಾಯಕಕ್ಕೆ ತಕ್ಕಷ್ಟೇ ಕೂಲಿ ಸ್ವೀಕರಿಸಬೇಕೆಂಬುದು ಅನುಕರಣೀಯ. ಮತ್ತು ಇದರಿಂದ ಲಂಚಗಳೆಲ್ಲಾ ತಾವಾಗಿ ನಿಲುತ್ತವೆ, ಭ್ರಷ್ಟಾಚಾರಕ್ಕೆಡೆಯಿಲ್ಲ.

ಕಾಯಕವೆಂದರೆ ಕಾಯವಿರುವವರು ಮಾಡಲೇ ಬೇಕಾದ ಕರ್ಮ ಅಥವಾ ಅವಶ್ಯ ಕರ್ತವ್ಯ. ಜೀವನೋಪಾಯಕ್ಕೆ ಕಾಯಕ ಮಾಡಲೇಬೇಕು. “ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಾರ್ಪಿತ”. ಯಾವುದೇ ವೃತ್ತಿಯಾಗಲೀ ಎಲ್ಲವೂ ಗೌರವಯುತವಾದದ್ದೆ. ಅವುಗಳಲ್ಲಿ ಹೆಚ್ಚುಕಡಿಮೆ, ಮೇಲು ಕೀಳು ಭಾವನೆ ಹೊಂದಿರಬಾರದು. ವೃತ್ತಿಯಿಂದ ಜಾತಿ ಮತಗಳ ಸೃಷ್ಟಿಸಿಕೊಳ್ಳಬಾರದೆಂದು ಶರಣರ ಆರ್ಥಿಕ ಚಿಂತನೆಯ ಮತ್ತೊಂದು ನಿಯಮ. ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ, ಹಾಸನಿಕ್ಕಿಸಾಲಿಗನಾದ, ವೇದವ ನೋದಿ ಹಾರುವನಾದ ಆದ್ದರಿಂದ ವೃತ್ತಿಗಳಿಂದ ಜಾತಿಯನ್ನು ಗುರುತಿಸಬಾರದು. ಎಲ್ಲಾ ವೃತ್ತಿ ಮಾಡುವವರೂ ಸಮಾನರು. ಎಲ್ಲಾ ವೃತ್ತಿಗಳೂ ಪವಿತ್ರವಾದ ವೃತ್ತಿಗಳೇ ಎಂಬ ಚಿಂತನೆಮಾಡಿ ವೃತ್ತಿ ಗೌರವವನ್ನು ಪ್ರತಿಪಾದಿಸಿದರು. ಇಂದು ನಮ್ಮ ಯುವಕ ವಿದ್ಯಾವಂತರಲ್ಲಿ ಈ ವೃತ್ತಿಗೌರವಭಾವ ಮೂಡಿಬಂದರೆ ನಿರುದ್ಯೋಗ ಸಮಸ್ಯೆಯನ್ನೇ ಪರಿಹರಿಸಬಹುದು.

ನಮ್ಮರಾಷ್ಟ್ರದ ಉತ್ಪನ್ನಗಳಾದ ದವಸ ಧಾನ್ಯವನ್ನು ಹಿತ-ಮಿತವಾಗಿ ಉಪಯೋಗಿಸಿ ಕೊಳ್ಳಬೇಕು. ಶರಣರು ಅನ್ನವನ್ನು ‘ಪ್ರಸಾದ’ ಎಂದರು. ಒಂದು ಕಣವೂ ವ್ಯರ್ಥವಾಗಬಾರದೆಂಬುದು ಇದರ ಅಂತರಾರ್ಥ, ಎಲ್ಲವೂ ಸದ್ವಿನಿಯೋಗವಾಗಬೇಕು. ಆಯ್ದಕ್ಕಿಮಾರಯ್ಯನ ಕಾಯಕ ವ್ರತವನ್ನಿಂದು ನಾವು ಪರಿಪಾಲಿಸಿದರೆ ನಮ್ಮ ಉತ್ಪನ್ನದಲ್ಲಿ ಸಾಗಾಣಿಕೆ ಮೊದಲಾದೆಡೆಗಳಲ್ಲಿ ವ್ಯರ್ಥವಾಗಿ ಹಾಳಾಗುವ ಗಣನೀಯ ಪ್ರಮಾಣದ ದವಸವನ್ನು ಉಳಿಸಿಕೊಳ್ಳಬಹುದು. ದುರಾಶೆಗಳನ್ನು ನಿವಾರಿಸಬಹುದು. ಅತಿಯಾದ ಸಂಗ್ರಹವನ್ನು ತಡೆಯಬಹುದು. ಕಾಳಿನ ರಾಶಿಗೆ ಕಲ್ಲು ಮಣ್ಣುಗಳನ್ನು ಬೆರೆಸಿ ಮಾರುವ ರಾಕ್ಷಸೀ ಪ್ರವೃತ್ತಿಯನ್ನು ಅಳಿಸಿಹಾಕಲೂ ಬಹುದು.

‘ಶರಣರ ಕಾಯಕವೇ ಕೈಲಾಸವೆನ್ನುವ’ ತತ್ವದ ಹಿಂಬದಿಯಲ್ಲಿರುವ ಆರ್ಥಿಕ ತತ್ವಗಳು, ಸಮಾಜವಾದದ ಸಮತಾವಾದದ ತತ್ವಗಳೇ ಇಂದಿಗೆಂಬ ನಾಳೆಗೆಂಬ ಚಿಂತೆ ಎಮಗೇಕೆ, ತಂದಿಕ್ಕುವ ಶಿವನಿಗೆ ಬಡತನವೇಕೆ ? ಎನ್ನುವ ಉಕ್ತಿಯಲ್ಲಿ ಯಾವುದನ್ನೇ ಆಗಲಿ ಅತಿಯಾಗಿ ಸಂಗ್ರಹಿಸಿಟ್ಟುಕೊಳ್ಳಬಾರದೆನ್ನುವುದೇ ಶರಣರ ಭಾವನೆ. ಇದರ ಅನುಷ್ಠಾನ ದಿಂದ ಕಾಳಸಂತೆಯೂ, ಭ್ರಷ್ಟಾಚಾರವೂ ಇಲ್ಲ. ಲಂಚ ಗುಳಿತನಕ್ಕೆಡೆಯಿಲ್ಲ. ಈ ಕಾಯಕತತ್ವದಲ್ಲಿ ಮೇಲು ಕೀಳು ಎನ್ನುವ ಪರಿವೆಯೇ ಬರುವುದಿಲ್ಲ. ಎಲ್ಲರೂ ಒಂದೆ ಎಲ್ಲ ಕಾಯಕವೂ ಒಂದೆ. ಎನ್ನುವ ಭಾವನೆ ಮೂಡಿ ಸಮಾಜದಲ್ಲಿ ಇಂದು ನಾವು ಕಾಣುತ್ತಿರುವ ಸಮಸ್ಯೆಗಳೆಲ್ಲಾ ತಾನೇ ತಾನಾಗಿ ಮಾಯವಾಗುತ್ತವೆ. ಶರಣರು ನಿರೂಪಿಸಿ ಆಚರಿಸಿ ತೋರಿಸಿದ ಕಾಯಕತತ್ವ ಆಧಾರಿತವಾದ ಆರ್ಥಿಕ ಚಿಂತನೆಯಂತೆ ನಮ್ಮ ಸಮಾಜದ ದೇಶದ ಯೋಜನೆಗಳನ್ನು ರೂಪಿಸಿಕೊಂಡು ಅಳವಡಿಸಿಕೊಂಡು ಯಾವ ವೃತ್ತಿಯಲ್ಲೇ ಇರಲಿ, ಸೇವಕ ವೃತ್ತಿಯಾಗಲೀ ಸ್ವಾಮಿ ವೃತ್ತಿಯಾಗಲೀ, ರಾಜ ಕಾರಣವಾಗಲೀ, ಕಷ್ಟ ಕರ್ಮವಾಗಲೀ, ಸತ್ಯ ಶುದ್ಧ ಕಾಯಕ ತತ್ವದ ನಿಯಮದಂತೆ ಅರ್ಪಣಾಭಾವದಿಂದ ತಮ್ಮ ತಮ್ಮ ಕಾಯಕವನ್ನು ಮಾಡಿದರೆ, ಹೊರದೇಶಗಳಿಂದ ಸಮಾಜವಾದದ ತತ್ವಗಳನ್ನು ಆಮದುಮಾಡಿಕೊಳ್ಳದೆ ಭಾರತೀಯರದೇ ಆದ ಸಮತಾವಾದ, ಹಾಗೂ ಸರ್ವಸಮಾನತೆಯ ಸಮಾಜವಾದವನ್ನು ಕ್ರಾಂತಿಯಿಲ್ಲದೆ ಸುಲಭವಾಗಿ ಸ್ಥಾಪಿಸಿ, ಇಂದಿನ ಎಲ್ಲ ಸಮಸ್ಯೆಗಳನ್ನೂ ಪರಿಹರಿಸಿಕೊಂಡು ಆರ್ಥಿಕ ಸ್ವಾತಂತ್ರ್ಯವನ್ನು ಪಡೆದುಕೊಂಡು ಜನತೆಯ ಕಲ್ಯಾಣವನ್ನು ಸಾಧಿಸಬಹುದು ●

---

**ಬೆಳಗಲಿ ‘ ಸಿದ್ಧಗಂಗಾ ’**

ಮನೆ ಮನೆಯ ಸೇರಲಿ ಮನ ಮನವ ತುಂಬಲಿ
ನಿತ್ಯ ನಿತ್ಯ ಬೆಳಗಲಿ ಸಿದ್ಧಗಂಗಾ.
ನವಿಕಥೆಗಳ ಒಳಗೊಂಡು ಬರಲಿ
ಸುಂದರ ಕವನಗಳ ಕೂಡಿ ಬರಲಿ
ಸಿದ್ಧಗಂಗಾ ನಾಡೆಲ್ಲ ತುಂಬಲಿ
ಹೊಸವರ್ಷದ ಹೊಸ ವಿಷಯಗಳ
ಹೊಮ್ಮಿ ಬಂದು ಕೀರ್ತಿ ಕಾಣಲಿ.
ಅಧಿಕ ಸದಸ್ಯರ ಹೊಂದಿ ಬರಲಿ
ಕೀರ್ತಿ ತುಂಬಿ ಬೆಳಗಲಿ ಸಿದ್ಧಗಂಗಾ.

—ಚಿ. ನಂಜೇಗೌಡ
ಸಿದ್ಧಗಂಗಾ

# ಸರ್ವಜ್ಞ

—ಹೆಚ್. ದೇವೀರಪ್ಪ

ಕನ್ನಡವ ಕನ್ನಡಕ ಕನ್ನಡಿಗರೆಲ್ಲರಿಗೆ
ಕನ್ನಡದ ಕನ್ನಡಿಯದೇನೆಂದು ತೋರಿ
ಕನ್ನಡವು ಕನ್ನಡಿಯು, ತಾ ಬೇರೆ ಅಲ್ಲ - ಈ
ಕನ್ನಡಿಯ ನೋಡದವನು ಕನ್ನಡಿಗನಲ್ಲ;
ಎನ್ನುತ್ತ ಬೆಳಗಿದನು ಕನ್ನಡದ ಜಾಣ !!
ಕನ್ನಡವು ಕನ್ನಡಿಯ ಸರ್ವಜ್ಞ ಕಾಣ !! ॥ .

ಪಂಪ ವ್ಯಾಸನು ರನ್ನ ಹಂಪೆ ಹರಿಹರ ಚಾಮ
ಸೊಂಪಿನ ಷಡಕ್ಷರಿಯು ಕಂಪು ಲಕುಮನು ಭೀಮ
ಚಂಪು ಛಂದಗಳಲ್ಲಿ ಇಂಪು ಕಾವ್ಯಕೆ ಹೋರಿ
ಪೆಂಪು ಹೆಚ್ಚಿತು ಅದರ, ಜಗಕೆ ಸೊಬಗನು ತೋರಿ ॥
ಗುಂಪು ಕಟ್ಟಿಗರೆಲ್ಲ ಇಂತು ತಮ್ಮನು ತೋರೆ
ಗುಂಪನಗಲಿದ ಕವಿಯು ನಮ್ಮ ತೋರಿದ ನೆಮಗೆ ॥
ತಿರುಳುಗನ್ನಡ ತಿರುಕ ಮರುಳನಾದನು ಅವಗೆ
ಅರಳಿ ಹೋಯಿತು ಅವನ ಸರಳ ಭಾವಕೆ ಮನವು ॥

ಕೀರ್ತಿ ಶೇಷರಾದ ಉತ್ತಂಗಿ ಚನ್ನಪ್ಪನವರು ಸರ್ವಜ್ಞನಿಗೆ ಒಪ್ಪಿಸಿದ ಭಾವ-ಕಾಣಿಕೆ ಇದು. 'ಮಂಡೆ ಬೋಳಿಸಿಕೊಂಡು' 'ತುಂಡುಗಂಬಳಿಹೊದೆದು', 'ಕರದಿ ಕಪ್ಪರ ಹಿಡಿದು' 'ಹಿಂಡನಗಲಿದ ಗಜದಂತೆ' ಕರ್ನಾಟಕ ದಾದ್ಯಂತ ಅಡ್ಡಾಡಿ, 'ತಿರಿವರಿಂಸಿರಿವಂತರಾರು' ಎಂದು ಘೋಷಿಸುತ್ತ, ಕನ್ನಡ ಜನತೆಯ ನಡೆ ನುಡಿಗಳನ್ನು ತಿದ್ದುತ್ತ ಅನವರತವೂ ಅವರ ಲೇಸನ್ನೆ ಹಾರೈಸುತ್ತಲಿದ್ದಾನೆ ನಮ್ಮ ಸರ್ವಜ್ಞ. ಕನ್ನಡಿಗರೆಲ್ಲರೂ 'ಇವನೆಮ್ಮವ ಇವನೆಮ್ಮವ' ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ಹಿರಿಯ ಮಹಾನುಭಾವ. ಇವನ ವಚನರತ್ನಗಳ ಬೆಳಕು ಇಂದಿಗೂ ಕನ್ನಡಿಗರ ಮನದ ಮನೆಯನ್ನು ಬೆಳಗುತ್ತಿರುವುದು ; ಅವರ ಬದುಕುಬಾಳುಗಳನ್ನು ಹಸನುಗೊಳಿಸುತ್ತಿರುವುದು.

ಇಷ್ಟಾದರೂ ಈತನ ಭವ್ಯಬಾಳುವೆಯ ವಿವರ ನಮಗೆ ತಿಳಿಯದು. ಕನ್ನಡನಾಡಿನ ಕನ್ನಡಿಯಂತಿರುವ ಬೆಳುವಲನಾಡಿನ ಅಂಬಲೂರು ಈತನ ಜನ್ಮಸ್ಥಳ.

ಅಂಬಲೂರೊಳಗೆಸೆವ ಕುಂಬಾರಸಾಲೆಯಲಿ
ಇಂಬಿನ ಕಳೆಯು ಮೋರೆಯೊಳು ಬಸವರಸ
ನಿಂಬಿಟ್ಟ ನೆನ್ನ ಸರ್ವಜ್ಞ ।
ತಂದೆ ಕುಂಬರ ಮಲ್ಲ ತಾಯಿ ಮಾಳಲೆದೇವಿ
ಇಂದು ಶೇಖರನ ವರಪುತ್ರ ಧರಣೀಗೆ
ಬಂದು ಜನಿಸಿದನು ಸರ್ವಜ್ಞ ॥

ಆಜನ್ಮಸಿದ್ಧನಾದ ಈತನ ಬೆಳವಣಿಗೆಯನ್ನು ದಿವ್ಯ ತೇಜಸ್ಸನ್ನೂ ಕಂಡವರು, ಸೋಜಿಗಗೊಂಡು ಕುಂಬಾರರ ಹೊಟ್ಟೆಯಲ್ಲಿ ಇಂತಹ ದಿವ್ಯ ಲಕ್ಷಣಸಂಪನ್ನ ಶಿಶು, ಎಲ್ಲಾದರೂ ಉಂಟೆ? ಎಂದುಕೊಂಡು ಮಾಳಲೆಯನ್ನೆ ಕೇಳಿದರಂತೆ. ಅದಕ್ಕೆ ಮಲ್ಲಮ್ಮ ಕೊಡುವ ಉತ್ತರ, ಅದನ್ನು ಕೇಳಿ ಸರ್ವಜ್ಞ ಕೆರಳಿದ್ದು ಈ ಪದ್ಯಗಳಲ್ಲಿದೆ.

ಬೆಳೆಯನ್ನವರಿದೆಂದು ಕಳೆಯಕಂಡವರೆಲ್ಲ
ಮಳೆಯಲ್ಲಿ ಸಸಿಯಾನರಿತು ತಾಂಮಾಳಿಯನು
ತಿಳಿವವರು ಆರಿಗು ಸರ್ವಜ್ಞ ॥
ಮಾಳನೂ ಮಾಳಿಯೂ ಕೂಡಿತ್ತ ಹೆಮ್ಮೆಯಲಿ
ಕೇಳಲೆನ್ನಾರ ಮಗನೆಂದು - ನಾ ಶಿವನ
ಮೇಳದವನೆಂದೇ ಸರ್ವಜ್ಞ ॥
ನೂಕಿದರು ಅವರಾಗ ಕೂಕತನದೊಳು ಬೇಗ
ಲೋಕದೊಳಗೆಲ್ಲ ಕಂಡುದನು ನುಡಿದು ತಾ
ನೇಕವಾಗಿಹನು ಸರ್ವಜ್ಞ ॥

ಇನ್ನೂ ಎಳೆಯನಾಗಿದ್ದಾಗಲೇ ಹುಟ್ಟಿದ ಮನೆಯನ್ನು ಬಿಟ್ಟು ಲೋಕದೊಳಗೆ ಏಕವಾಗಿ ನಡೆದ ಈತನು ಎಲ್ಲಿ ವಿದ್ಯಾಭ್ಯಾಸ ಮಾಡಿದನೋ ಯಾವ ಗುರುವು ಈತನಿಗೆ ಉಪದೇಶವಿತ್ತನೋ, ಯಾವ ಸಿದ್ಧಪುರುಷನಲ್ಲಿ ಯೋಗಸಾಧನೆ ಮಾಡಿದನೋ ಈಗ ಒಂದೂ ಗೊತ್ತಾಗುವುದಿಲ್ಲ. ಒಂದೆರಡು ಪದ್ಯಗಳಲ್ಲಿ ಮಾತ್ರ ಈತನು ವಚನಕಾರರ, ಅದರಲ್ಲಿಯೂ ಜೇಡರ ದಾಸಿಮಯ್ಯ ಮತ್ತು ಬಸವಣ್ಣನವರ ವಚನ ಸುಧೆಯನ್ನ ಸವಿದು ಅದನ್ನು ತನ್ನ ಲೋಕಾನುಭವ ಯೋಗಸಿದ್ಧಿಯೊಡನೆ ಪುಷ್ಟುಗೊಳಿಸಿಕೊಂಡು ವಚನ ಗನ್ನಡವನ್ನು ಮಿಸುಸಿ ಕನ್ನಡವನ್ನಾಗಿ ಮಾಡಿಕೊಂಡಿರುವನು ಎಂದು ತೋರುತ್ತಿದೆ.

ಅಂದು ಜೇಡರದಾಸ, ಹಿಂದೆ ನಾವರುಚಿಯು
ಇಂದು ಸರ್ವಜ್ಞ ನಾನಿಮ್ಮ - ಕರುಣದ
ಕಂದ ಕಾಣಯ್ಯ ಸರ್ವಜ್ಞ

ಹಸಿವಿಗಂಬಲಿಮುದ್ದು ಬಿಸಿಲಿಂಗೆ ಕೊಡೆಮುದ್ದು
ಬಸಿರೊಳಿ ಬಂದ ಮಗ ಮುದ್ದು – ಲೋಕಕ್ಕೆ
ಬಸವಣ್ಣ ಮುದ್ದು ಸರ್ವಜ್ಞ.

ಬಸವ ಗುರುವಿನ ಹೆಸರು ಬಲ್ಲವರಾರಿಲ್ಲ
ಪುಸಿಮಾತನಾಡಿ ಕೆಡದಿರಿ ಲೋಕಕ್ಕೆ
ಬಸವನೇ ಕರ್ತ ಸರ್ವಜ್ಞ.

ಮಹಾಯೋಗಿಗಳಿಗೆ ತಮ್ಮ ಪೂರ್ವಜನ್ಮದ ಅರಿವಿರುತ್ತದೆಯೆಂಬುದಕ್ಕೆ ಅನೇಕ ನಿದರ್ಶನಗಳಿವೆ. ಸರ್ವಜ್ಞನು ತಾನೇ ಹೇಳಿಕೊಂಡಿರುವಂತೆ, ಹಿಂದೆ ಜೇಡರ ದಾಸಿಮಯ್ಯನಾಗಿದ್ದವನು ; ಅದಕ್ಕಿಂತ ಮುಂಚೆ ವರರುಚಿಯಾಗಿ ಹುಟ್ಟಿದ್ದವನು. ದಾಸಿಮಯ್ಯನ ಸುಜ್ಞಾನ, ವರರುಚಿಯ ವೈರಾಗ್ಯ ಬಸವಣ್ಣನವರ ಭಕ್ತಿ ಇವುಗಳ ತಿರುಮುಕ್ಕೂಡಲು ಸರ್ವಜ್ಞ.

ಆದರೆ ಬಸವಣ್ಣನವರ ವಿಷಯದಲ್ಲಿ ಈತನಿಗೆ ಎಲ್ಲೆಯಿಲ್ಲದ ಎಣೆಯಿಲ್ಲದ ಪೂಜ್ಯಭಾವ. ಹಸಿವೆಯಾದವನಿಗೆ ರಾಗಿಯ ಅಂಬಲಿಯೋ ಜೋಳದ ಅಂಬಲಿಯೋ ಕೊಡುವಷ್ಟು ತೃಪ್ತಿ ಸಮಾಧಾನವನ್ನು ದೇವಲೋಕದ ಅಮೃತವೂ ನೀಡಲಾರದು ; ಸುಡುಬಿಸಿಲಿನಲ್ಲಿ ಏಕಾಂಗಿಯಾಗಿ ಬೆವರು ಸುರಿಸುತ್ತ, ಕೊಡೆಯ ನೆಳಲು ಎಷ್ಟು ಆನಂದದಾಯಕವಾಗಿರುವುದೆಂಬುದು ಅನುಭವಿಸಿದವರಿಗೇ ಗೊತ್ತು. 'ಹೆತ್ತವರಿಗೆ ಹೆಗ್ಗಣ ಮುದ್ದು' ಎಂದಂತೆ ಬಸಿರಲ್ಲಿ ಬಂದ ಮಗ ಮುದ್ದು. ಇದು ತೀರ ಸಹಜ. ಆದರೆ ಬಸವಣ್ಣ ಲೋಕಕ್ಕೆಲ್ಲಾ ಮುದ್ದು ಹೇಗೆ? ಸುಜ್ಞಾನದ ಹಸಿವಿನಿಂದ ಕೊರಗುತ್ತಿದ್ದವರಿಗೆ ಬಸವಣ್ಣನವರು ಸದ್ಭಕ್ತಿಯ ಪ್ರಸಾದವನ್ನು, 'ಸುಜ್ಞಾನವೆಂಬ ಅಂಬಲಿಯನ್ನು ನೀಡಿದರು. ಸಾಮಾಜಿಕ ಅನ್ಯಾಯಕ್ಕೆ ಬಲಿಯಾಗಿ ಬೆಂದು ಬೇಗುದಿಗೊಂಡಿದ್ದ ದಲಿತವರ್ಗಕ್ಕೆ ನೆಲೆ ನೆಳಲುಗಳನ್ನು ಮಾಡಿ ಕೊಟ್ಟರು. ಆದುದರಿಂದಲೇ ತಾಯಿಯು ತನ್ನ ಬಸಿರಿನಿಂದ ಬಂದ ಮಗುವನ್ನು ಅನಂತ ವಾತ್ಸಲ್ಯದಿಂದ ಮುದ್ದಾಡುವಂತೆ ಲೋಕವೆಲ್ಲ ಬಸವಣ್ಣನವರನ್ನು ಮುದ್ದು ಮಾಡುವುದು. ನಾಡೋಜನಾದ ಸರ್ವಜ್ಞನು ಈ ವಚನದಲ್ಲಿ 'ಮುದ್ದು' ಎಂಬ ಮಾತನ್ನು ಅತ್ಯಂತ ಸಮರ್ಥರೀತಿಯಲ್ಲಿ ಬಳಸಿಕೊಂಡಿದ್ದಾನೆ. ಬಸವ ಗುರುವಿನ ಹೆಸರನ್ನು ಬಲ್ಲವರಿಲ್ಲವೆ ? ಹುಸಿ ಮಾತನ್ನಾಡಿ ಕೆಡಬೇಡಿ. ಲೋಕಕ್ಕೆ ಬಸವನೇ ಕರ್ತ, ಎಂದು ಸಹಜವಾದ ಅಭಿಮಾನದಿಂದ, ಅಕ್ಕರೆಯಿಂದ ಅಣ್ಣನವರನ್ನು ಕೊಂಡಾಡಿದ್ದಾನೆ. ಒಬ್ಬ ಮಹಾತ್ಮನು ಇನ್ನೊಬ್ಬ ಮಹಾತ್ಮನಿಗೆ ಒಪ್ಪಿಸಿರುವ ಕವನ–ಕಾಣಿಕೆಗಳಿವು.

ಈತನಿಗೆ ತಾಯಿತಂದೆಗಳಿಟ್ಟ ಹೆಸರಾವುದೋ ತಿಳಿಯದು. ಸರ್ವಜ್ಞಮೂರ್ತಿ ಎಂದೇ ರೂಢಿಯ ಹೆಸರು. ಚಾಲುಕ್ಯ ಚಕ್ರವರ್ತಿ ಸೋಮೇಶ್ವರನು 'ಮನಸೋಲ್ಲಾಸ' ಎಂಬ ಗ್ರಂಥವನ್ನು ಬರೆದಿದ್ದಾನೆ. ಆ ಗ್ರಂಥ ಸಂಸ್ಕೃತದಲ್ಲಿದೆ ; ವಿಶ್ವಕೋಶಸದೃಶವಾದ್ದು. ಅದರಲ್ಲಿ ಕನ್ನಡ ತ್ರಿಪದಿಯ ಲಕ್ಷಣವನ್ನು ಹೇಳಿದೆ. ಸರ್ವಜ್ಞ ಕೃತಿಯೂ ಒಂದು ರೀತಿಯಲ್ಲಿ ವಿಶ್ವಕೋಶವೇ. ಈತನ ವಚನಗಳು ತ್ರಿಪದಿಯ ಛಂದಸ್ಸಿನಲ್ಲಿವೆ. ಸೋಮೇಶ್ವರ ತನ್ನ ಹಲವು ಶಾಸನಗಳಲ್ಲಿ ಹೇಳಿಕೊಂಡಿರುವಂತೆ ಸರ್ವಜ್ಞ ಚಕ್ರವರ್ತಿ ; ಈತ ಸರ್ವಜ್ಞ ಭಿಕ್ಷಾವರ್ತಿ'. ಆದುದರಿಂದ ಆ ಸರ್ವಜ್ಞನಿಗೂ ಈತನಿಗೂ ಏನೂ ಸಂಬಂಧವಿಲ್ಲ. ಆದರೆ ಸೋಮೇಶ್ವರನು ಹೇಳುವ ಪ್ರಕಾರ ತ್ರಿಪದಿಯ ಎರಡನೆಯ ಪಾದದ ಅರ್ಥವನ್ನು ಹೇಳಿ, ಮತ್ತೆ ಅದೇ ಪಾದವನ್ನು ಹಾಡಿ ಅನಂತರ ನಾಲ್ಕನೆಯ ಪಾದವನ್ನು ಹಾಡಬೇಕು. ಸರ್ವಜ್ಞನು ಇದೇ ನಿಯಮವನ್ನು ಪಾಲಿಸಿದ್ದಾನೆ. ಕೇಳಿ,

ಸರ್ವಜ್ಞನೆಂಬುವನು ಗರ್ವದಿಂದಾದವನೆ
ಸರ್ವರೊಳೊಂದು ನುಡಿಗಲಿತು
ಸರ್ವರೊಳೊಂದು ನುಡಿಗಲಿತು ವಿದ್ಯದ
ಪರ್ವತವೇ ಆದ ಸರ್ವಜ್ಞ

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ
ಒಬ್ಬ ಸರ್ವಜ್ಞ ಕರ್ತನು,
ಒಬ್ಬ ಸರ್ವಜ್ಞ ಕರ್ತನು ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ.

ಹೀಗೆ ಎರಡನೆಯ ಪಾದದ ಮೂರು ಗಣಗಳನ್ನು ಅಂದು, ಮತ್ತೆ ಆ ಪಾದವನ್ನು ಪೂರ್ತಿಯಾಗಿ ಪುನರಾವರ್ತನೆ ಮಾಡಿ ಅನಂತರ ನಾಲ್ಕನೆಯ ಪಾದವನ್ನು ಅನ್ನಬೇಕು. ಆಗಲೆ ತ್ರಿಪದಿಯ ಮೂರುಕಾಲಿನ ಮಣೆಯುದಂತೆ ಅಭದ್ರವಾಗದೆ ನಾಲ್ಕುಕಾಲಿನ ಮಣೆ

ಯಂತೆ ಸುಭದ್ರವಾಗುತ್ತದೆ. ಇಂದಿನ ಮೂರುಗಾಲಿಯ ವಾಹನಗಳ ಗತಿಯನ್ನೂ ಸಾಗಾಲಿಯ ಗತಿಯನ್ನೂ ಹೋಲಿಸಿ ನೋಡಿದರೆ ಈ ಅಂಶ ಸುಸ್ಪಷ್ಟವಾಗುತ್ತದೆ. ತ್ರಿಪದಿಯನ್ನು ಸೋಮೇಶ್ವರ ಹೇಳುವ ರೀತಿಯಲ್ಲಿ ಹಾಡಿದರೇನೇ ಅದು ಅರ್ಥಭಾವ ರಸರಾಗ ತುಂಬಿ ಆಹ್ಲಾದವನ್ನುಂಟು ಮಾಡುತ್ತದೆ. ನಮ್ಮ ಜಾನಪದದಲ್ಲಿ ಈ ಪಟ್ಟ ತುಂಬ ಬಳಕೆಯಲ್ಲಿದೆ. ಅದರ ಒಂದು ತುಣುಕು ಇದು ;

ಮಾವಿನ ಹೂವಿಗೆ ಯಾರು ಬಂದರು ಕಳ್ಳರು,
ದೇವೇಂದ್ರ ತನ್ನಾ ಮಡದೀಯ,
ದೇವೇಂದ್ರ ತನ್ನಾ ಮಡದೀಯ ಬಯಕೇಗೆ
ಮಾಯದಲಿ ಮುಗಿಲ ಕಳುಹೀದ ||

ಸರ್ವಜ್ಞನಿಗೆ ಜನಪದ ಸಾಹಿತ್ಯವೇ ವಚನದ ರಚನೆಯ ಗುರು; ಅನುಭಾವ ವಿದ್ಯೆಗೆ ಜೇಡರ ದಾಸಿಮಯ್ಯ, ಬಸವಣ್ಣನವರು ಗುರುಗಳು ; ಯೋಗ ವಿದ್ಯೆಗೆ ಗುರು ಯಾರೆಂಬುದು ಇನ್ನೂ ಸಂಶೋಧನೆಯಾಗಬೇಕು.

'ಸರ್ವಜ್ಞ' ಎಂಬ ಮುದ್ರೆಯ ಎರಡುಸಾವಿರಕ್ಕೂ ಹೆಚ್ಚಿನ ಸಂಖ್ಯೆಯ ವಚನಗಳು ಈಗ ನಾಡಿನಲ್ಲೆಲ್ಲ ಚಲಾವಣೆಯಲ್ಲಿವೆ. ಅವುಗಳಲ್ಲಿ ಸರ್ವಜ್ಞನ ಕಮ್ಮಟದಿಂದ ಹೊರಬಿದ್ದ ನಾಣ್ಯಗಳೆಷ್ಟು ನಕಲಿ ನಾಣ್ಯಗಳೆಷ್ಟು, ಅವು ಯಾವುವು ಎಂಬುದನ್ನು ಗುರುತಿಸುವ ಕಾರ್ಯ ಇನ್ನೂ ಆಗಬೇಕಾಗಿದೆ. ಅವುಗಳಲ್ಲಿ ಒಂದು ಸಾವಿರವಾದರೂ ಸರ್ವಜ್ಞ ವಿರಚಿತ ಎಂದು ತೋರುತ್ತಿದೆ. ಸೋಮೇಶ್ವರ ಚಕ್ರವರ್ತಿಯ 'ಮನಸೋಲ್ಲಾಸಕ್ಕೆ' 'ಅಭಿಲಷಿತಾರ್ಥ ಚಿಂತಾಮಣಿ' ಎಂಬ ಇನ್ನೊಂದು ಹೆಸರಿದೆ. ಸರ್ವಜ್ಞ ವಚನರಾಶಿಗೆ 'ಕನ್ನಡ ಅಭಿಲಷಿತಾರ್ಥ ಚಿಂತಾಮಣಿ' ಎಂದೋ ಕನ್ನಡದ ವಿಶ್ವಕೋಶ ಎಂದೋ ಕರೆದರೆ ಅನುಚಿತವಾಗಲಾರದು.

ಗುರುಪದ್ಧತಿ ಲಿಂಗ ಪದ್ಧತಿ, ಇಷ್ಟಲಿಂಗಪದ್ಧತಿ, ಶೈವಪದ್ಧತಿ, ಭಕ್ತ, ಮಹೇಶ್ವರ, ಜ್ಞಾನಯೋಗ ಶಿವಯೋಗ ಪದ್ಧತಿಗಳು ಪಾರಮಾರ್ಥಿಕ ವಿಷಯಗಳನ್ನು ಒಳಗೊಂಡಿವೆ. ದಾನಪದ್ಧತಿ, ರಾಜನೀತಿ ಪದ್ಧತಿ, ಸಂಗಪದ್ಧತಿ, ವಿಧಿವಶಪದ್ಧತಿ; ಬ್ರಾಹ್ಮಣ ಜೈನ ಪದ್ಧತಿಗಳು ಜ್ಯೋತಿಷ, ರಸವಾದ, ಕಾಲಜ್ಞಾನ, ಸ್ತ್ರೀ ಪದ್ಧತಿ ಮುಂತಾದವು ಮುಖ್ಯವಾಗಿ ಲೌಕಿಕ ವಿಚಾರಗಳನ್ನುಳ್ಳವು.

'ಪದ್ಧತಿ' ಎಂಬ ತಲೆ ಹೆಸರು ಈತನಿಟ್ಟಿರುವುದೇ. ಯಾವ ಪದ್ಧತಿಯ ಯಾವ ಪದ್ಯವೇ ಇರಲಿ, ಪಂಡಿತರಿಗೆ, ಪಾಮರರಿಗೆ ಸ್ತ್ರೀ ಬಾಲ ವೃದ್ಧರಿಗೆ ಅರ್ಥವಾಗುವಂತೆ ಬಹು ಸುಲಭ ಶೈಲಿಯಲ್ಲಿರುತ್ತವೆ, ರಮಣೀಯವಾಗಿರುತ್ತವೆ. "ಕಿರಿದರೊಳೆ ಪಿರಿದು ಅರ್ಥ"ವನ್ನಿಟ್ಟು ಹೇಳುವ ಕಲೆಗಾರಿಕೆ ಸರ್ವಜ್ಞನಿಗೆ ಸಿದ್ಧಿಸಿರುವಷ್ಟು ಮತ್ತಾರಿಗೂ ಸಿದ್ಧಿಸಿಲ್ಲ. ಸಿದ್ಧಿ ಪಡೆದವರಿದ್ದಾರೆ ಎನ್ನುವುದಾದರೆ ಅದರಲ್ಲಿ ಜೇಡರ ದಾಸಿಮಯ್ಯ ಮೊದಲಿಗನಾಗುತ್ತಾನೆ. ಆತನ ಅವತಾರವೇ ಸರ್ವಜ್ಞ ಎಂಬುದನ್ನು ಈ ಮೊದಲೇ ಹೇಳಿದೆ.

ರಸಿಕರ ಸರ್ವಜ್ಞನ ಮಾತಿನ ಮೋಡಿ ನೋಡಿ ಭಾವದ ಕಾವು ನೋಡಿ, ಕನ್ನಡದ ಕನ್ನಡಿ ನೋಡಿ.

ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ
ರಸಿಕನಲ್ಲದನ ಬರುಮಾತು
ರಸಿಕನಲ್ಲದನ ಬರುಮಾತು ಕಿವಿಯೊಳಗೆಕೂರ್
ದಸಿಯ ಬಡಿದಂತೆ – ಸರ್ವಜ್ಞ.

ಮಾತು ಬಲ್ಲಾತಂಗೆ ಏತವದು ಸುರಿದಂತೆ
ಮಾತಾಡಲರಿಯದಾತಂಗೆ
ಮಾತಾಡಲರಿಯದಾತಂಗೆ ಬರಿಯೇತ
ನೇತಾಡಿದಂತೆ ಸರ್ವಜ್ಞ.

ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ
ಬಲ್ಲಿದರು ಇದ್ದು ಬಲವಿಲ್ಲ
ಬಲ್ಲಿದರು ಇದ್ದು ಬಲವಿಲ್ಲ – ಸಾಹಿತ್ಯ
ವೆಲ್ಲರಿಗಿಲ್ಲ – ಸರ್ವಜ್ಞ.

ಇಲ್ಲಿ, 'ಸಾಹಿತ್ಯ' ಎಂದರೆ ಯೋಗ; ಪ್ರಾಪ್ತಿ, ಅಥವಾ ಅದೃಷ್ಟ ಎಂದರ್ಥ; ಕಾವ್ಯರಾಶಿ ಎಂದಲ್ಲ.

ಅಲ್ಲಪ್ಪನೂರಲಿ ಬಲ್ಲಪ್ಪ ಅಲ್ಲಪ್ಪ
ಬಲ್ಲಪ್ಪನಿಲ್ಲದೂರಲಿ
ಬಲ್ಲಪ್ಪನಿಲ್ಲದೂರಲಿ ಅಲ್ಲಪ್ಪ
ಬಲ್ಲಪ್ಪನ ಅಪ್ಪ – ಸರ್ವಜ್ಞ

ಅಲ್ಲಪ್ಪನ ಊರಿನಲ್ಲಿ ಬಲ್ಲಪ್ಪ ಇದ್ದರೂ ಅವನೇ ಅಲ್ಲಪ್ಪ. ಬಲ್ಲಪ್ಪನಿಲ್ಲದ ಊರಿನಲ್ಲಿಯೂ, ಅಲ್ಲಪ್ಪನೇ ಬಲ್ಲಪ್ಪ. —ಹೀಗೆ. ಸರ್ವಜ್ಞನ ಮಾತು ಬಾಣ ಬಿಟ್ಟಂತೆ ಗುಂಡು ಹೊಡೆದಂತೆ ನೇರವಾಗಿ ಗುರಿಯನ್ನು ತಪ್ಪದೆ ತಾಗುತ್ತವೆ.

ಸರ್ವಜ್ಞ ಎಂತಹ ಗಡುಚಾದ ತತ್ವಶಾಸ್ತ್ರವನ್ನೂ ಗಹನ ವಿಚಾರವನ್ನೂ ಬಹು ಸರಳ ರೀತಿಯಲ್ಲಿ ಎಲ್ಲರಿಗೂ ಅರ್ಥವಾಗುವಂತೆ ಹೇಳಬಲ್ಲ.

ಆ ದೇವ ಈ ದೇವ ಮಾದೇವನೆನಬೇಡ
ಆ ದೇವರ ದೇವ ಭುವನದ
ಆ ದೇವರ ದೇವ ಭುವನದ ಪ್ರಾಣಿಗಳಿ
ಗಾವನೆ ದೇವ ಸರ್ವಜ್ಞ.

ಕಲ್ಲಿನಲಿ ಮಣ್ಣಿನಲಿ ಮುಳ್ಳಿನಾ ಮೊನೆಯಲ್ಲಿ
ಎಲ್ಲಿ ನೆನೆದಲ್ಲಿ ಶಿವನಿರ್ಪ ನೀನಿ
ದ್ದಲ್ಲಿಯೇ ಇರುವ ಸರ್ವಜ್ಞ

ಆಗಿಲ್ಲ ಹೋಗಿಲ್ಲ ಮೇಗಿಲ್ಲ ಕೆಳಗಿಲ್ಲ
ತಾಗಿಲ್ಲ ತಪ್ಪು ತಡವಿಲ್ಲ
ತಾಗಿಲ್ಲ ತಪ್ಪು ತಡವಿಲ್ಲ – ಲಿಂಗಕ್ಕೆ
ದೇಗುಲವೆ ಇಲ್ಲ – ಸರ್ವಜ್ಞ.

'ದಯೆಯೇ ಧರ್ಮದ ಮೂಲ' ಎಂಬುದು ಜಗತ್ತಿನ ಧರ್ಮಬೋಧಕರೆಲ್ಲರೂ ಜ್ಞಾನಿಗಳೆಲ್ಲರೂ ಒಪ್ಪಿರುವ ಮಾತು. ಈ ನೀತಿಗೆ ಅತ್ಯಂತ ಹೆಚ್ಚಿನ ಮಹತ್ವ ಕೊಟ್ಟಿರುವುದು ಜೈನಧರ್ಮ. ಸರ್ವಜ್ಞ ಇವರಿಗಿಂತ ಪ್ರಗತಿಪರನಾಗಿದ್ದಾನೆ. ಅಷ್ಟೇ ಅಲ್ಲ, ಈ ತತ್ತ್ವ ಎಷ್ಟರಮಟ್ಟಿಗೆ ವ್ಯಾವಹಾರಿಕ ಎಂಬುದನ್ನೂ ನಮ್ಮ ಮುಂದಿಡುತ್ತಾನೆ. ಅಹಿಂಸಾವ್ರತಕ್ಕೆ ಅತಿಯಾದ ಮಹತ್ವ ಕೊಟ್ಟಿರುವವರನ್ನು ಲೇವಡಿ ಮಾಡುತ್ತಾನೆ. ಈತನ ವಾದ ಇಂದಿನವರೆಗೂ ಒಂದು ದೊಡ್ಡ ಸವಾಲು.

ಕೊಲುವ ಧರ್ಮವನೊಯ್ದು ಒಲೆಯೊಳಗೆ ಇಕ್ಕುವ
ಕೊಲಲಾಗದೆಂಬ ಜೈನನ
ಕೊಲಲಾಗದೆಂಬ ಜೈನನ ಮತವೆನ್ನ
ತಲೆಯಮೇಲಿರಲಿ ಸರ್ವಜ್ಞ ||

ಎಂತು ಪ್ರಾಣಿಯು ಕೊಲ್ಲದೆಂತುಂಟು ಜಿನಧರ್ಮ
ಜಂತು ಬಸುರಲ್ಲಿ ಸಾಯುಲುರೆ
ಜಂತು ಬಸುರಲ್ಲಿ ಸಾಯುಲುರೆ ಆ ಜೀವಿ
ಎಂತಾದ ಶ್ರವಣ ಸರ್ವಜ್ಞ ||

ಜೀವಿ ಜೀವಿಯು ತಿಂದು ಜೀವಿಪುದು ಜಗವೆಲ್ಲ
ಜೀವದಿಂ ಹೊರಗೆ ತಿಂಬವರ
ಜೀವದಿಂ ಹೊರಗೆ ತಿಂಬವರ ಕಾಣೆ ನಾ।
ಜೀವವೀ ಜಗವು ಸರ್ವಜ್ಞ ||

ಚರಜೀವವನು ತಿಂದು ಚರಿಸುವುದು ಜಗವರ್ಧ
ಚರಿಸವ ಜೀವಿಗಳ ತಿಂದು
ಚರಿಸದ ಜೀವಿಗಳ ತಿಂದು ಜಗವರ್ಧ
ಚರಿಸುವುದು ನೋಡ ಸರ್ವಜ್ಞ ||

ಜೀವವಲ್ಲದುದು ಜಗತ್ತಿನಲ್ಲಿ ಎಲ್ಲಿದೆ? ಸಂಚಾರ ಮಾಡುವ ಮೃಗ ಪಕ್ಷಿ ಮೀನುಗಳನ್ನು ತಿಂದು ಅರ್ಧ ಜಗತ್ತು ಚಲಿಸುತ್ತಿದೆ; ಇನ್ನರ್ಧ ಜಗತ್ತು ಚರಿಸದೇ ಇರುವ ಸಸ್ಯಾದಿಗಳನ್ನು ತಿಂದು ಚರಿಸುತ್ತಿದೆ. ಕಡೆಗೆ ಈತನ ತೀರ್ಮಾನ ಪರಮೋಚ್ಚ ಮಟ್ಟದ ಮಹಾಜ್ಞಾನಿಗಳು ಕೊಡುವಂತಹುದೇ, ಅದೂ ಅವ್ಯವಹಾರ್ಯ. ಒಂದು ರೀತಿಯಲ್ಲಿ ಅತಿಯೆ. ಆದರೆ ಈತನ ವೈಚಾರಿಕ ಕ್ರಾಂತಿ ಇಂದಿನವರನ್ನು ಬೆರಗುಗೊಳಿಸುವಂತಾದ್ದು.

ಜೀವಿ ಜೀವವತಿಂದು ಜೀವಿಗಳ ಪುಟ್ಟಿರೆ
ಸಾವು ಎಲ್ಲಿಹುದು ಸ್ವಾರ್ಥಾ
ಸಾವು ಎಲ್ಲಿಹುದು ಸ್ವಾರ್ಥವೇ ಜಗದೊಳಗೆ
ಸಾವೆಂದು ತಿಳಿಯಾ ಸರ್ವಜ್ಞ.

ಸಾವು ಜೀವಿಗಳೆರಡು ಭಾವಿಸಲು ಒಂದಯ್ಯ
ಜೀವಿಸಲು ಬೀಜಸಾವಂತೆ
ಜೀವಿಸಲು ಬೀಜಸಾವಂತೆ ಜಗಹಿತಕೆ
ಸಾವುದೇ ಜೀವ ಸರ್ವಜ್ಞ.

ವಿದ್ಯೆ, ಬುದ್ಧಿ, ಐಶ್ವರ್ಯ ಅನುಭಾವ, ಆತ್ಮಜ್ಞಾನ ಅಕ್ಷರ ಕಲಿಕೆಗಳು :—

ವಿದ್ಯವುಳ್ಳನ ಮುಖವು ಮುದ್ದು ಬರುವಂತಿಕ್ಕು
ವಿದ್ಯವಿಲ್ಲದನ ಬರಿಮುಖವು
ವಿದ್ಯವಿಲ್ಲದನ ಬರಿಮುಖವು ಹಾಳೂರ
ಹದ್ದಿನಂತಕ್ಕು ಸರ್ವಜ್ಞ ||

ಜನಕೆ ರಂಜನೆ ಲೇಸು ವನಕೆ ಪುಷ್ಪವು ಲೇಸು
ಧನಕಿಂತ ಬುದ್ಧಿ ನೆರೆಲೇಸು
ಧನಕ್ಕಿಂತ ಬುದ್ಧಿ ನೆರೆಲೇಸು ಬುದ್ಧಿಯಿಂ
ಅನುಭಾವ ಲೇಸು ಸರ್ವಜ್ಞ ||

ಬೊಮ್ಮವನು ಅರಿದಿಹರೆ ಸುಮ್ಮನೆ ಇರಬೇಕು
ಬೊಮ್ಮವನು ಅರಿದು ಉಸುರಿದರೆ
ಬೊಮ್ಮವನು ಅರಿದು ಉಸುರಿದರೆ ಕಳಹೋಗಿ
ಕೆಮ್ಮಿದಂತಕ್ಕು ಸರ್ವಜ್ಞ ||

ಅಕ್ಕರವು ಲೇಕಕ್ಕೆ ತರ್ಕತಾ ವಾದಕ್ಕೆ
ಮಿಕ್ಕ ಓದುಗಳು ತಿರುಪೆಗೆ
ಮಿಕ್ಕ ಓದುಗಳು ತಿರುಪೆಗೆ ಮೋಕ್ಷಕೆರ
ಡಕ್ಕರವೇ ಸಾಕು ಸರ್ವಜ್ಞ ||

ಬ್ರಹ್ಮಜ್ಞಾನವನ್ನು, ಎಂದರೆ ಆತ್ಮಸಾಕ್ಷಾತ್ಕಾರ ಪಡೆದವನು ಸುಮ್ಮನೆ ಇರಬೇಕು. ತನ್ನ ಆ ದಿವ್ಯಾನುಭವವನ್ನು ಅದು ಹೇಗಿರುತ್ತದೆಯೆಂದು ಹೇಳಹೋಗಬಾರದು. ಹಾಗೆ ಮಾಡಿದನೆಂದರೆ ಪೇಚಿಗೆ ಸಿಕ್ಕಿಕೊಳ್ಳುತ್ತಾನೆ. ಮೋಕ್ಷಗಳಿಸುವುದಕ್ಕೆ ಅಕ್ಷರ ವಿದ್ಯೆ ಬೇಕೆಬೇಕು ಎನ್ನುವಂತಿಲ್ಲ. ಎರಡು ಅಕ್ಷರ, ಶಿವ, ಹರಿ, ಹರ, ರಾಮ, ಕೃಷ್ಣ, ಜಿನ, ಅಲ್ಲ—ಇಂಥ ಎರಡು ಅಕ್ಕರಗಳೇ ಸಾಕು. ಆ ಎರಡು ಅಕ್ಕರಗಳನ್ನು ಅನವರತವೂ ಸರ್ವಭಾವದಿಂದ ಜಪಿಸುತ್ತಿದ್ದರೆ ಸಾಕು. ಆದರೆ ಒಂದು ನಿರ್ಬಂಧ: ಸತ್ಯಶುದ್ಧಕಾಯಕವಿಲ್ಲದಿದ್ದರೆ ಯಾವ ಅಕ್ಕರವೂ ಶಿವನ ಆಕ್ಕರೆಯನ್ನು ತಂದುಕೊಡಲಾರದು.

ಕಾಯಕವು ಉಳ್ಳನಕ ನಾಯಕನು ಎನಿಸಿಪ್ಪ
ಕಾಯಕವು ತೀರ್ದ ಮರುದಿನವೆ
ಕಾಯಕವು ತೀರ್ದ ಮರುದಿನವೆ ಸುಡುಗಾಡ
ನಾಯಕನು ಎನಿಪ ಸರ್ವಜ್ಞ ।

ಖಂಡಿಸದೆ ಕರಣವನು ದಂಡಿಸದೆ ದೇಹವನು
ಉಂಡುಂಡು ಸ್ವರ್ಗಕೈದಲ್ಕೆ
ಉಂಡುಂಡು ಸ್ವರ್ಗಕೈದಲ್ಕೆ ಸ್ವರ್ಗವನು
ರಂಡೆಯಾಳುವಳೆ ಸರ್ವಜ್ಞ ।

ಕಯ್ಯೆತ್ತಿ ಕೊಡಲಿಲ್ಲ ಮಯ್ಯದಂಡಿಸಲಿಲ್ಲ
ಅಯ್ಯಗಳೆಲ್ಲ ಹರಿಯಲ್ಕೆ
ಆಯ್ಯಗಳೆಲ್ಲ ಅರಿಯಲ್ಕೆ ಕೈಲಾಸ
ಕಯ್ಯ ಮಂಚಿಗೆಯೇ ಸರ್ವಜ್ಞ ॥

ಪಾಲುಮಾರಿಕೆಯನ್ನು ಹಲವು ರೀತಿಗಳಲ್ಲಿ ಸಂದರ್ಭಸಿಕ್ಕಿದಾಗಲೆಲ್ಲ ಖಂಡಿಸುತ್ತಾನೆ ಸರ್ವಜ್ಞ. ವಚನಕಾರರಿಗಿಂತ ಶಕ್ತಿಯುತವಾಗಿ ಸತ್ಯಶುದ್ಧಕಾಯಕವನ್ನು ಪ್ರತಿಪಾದಿಸುತ್ತಾನೆ. ಕಾಯಕಮಾಡದವನು ಸುಡುಗಾಡಿನ, ಅಂದರೆ ಸ್ಮಶಾನದ ನಾಯಕ; ಇದ್ದರೂ ಸತ್ತಂತೆ: ಸ್ವರ್ಗವನು ರಂಡೆಯಾಳುವಳೆ ಎಂಬ ಮಾತಿನಲ್ಲಿ ಎಂತಹ ಕಟುವಿಡಂಬನೆಯಿದೆ ನೋಡಿ. 'ಕೈಲಾಸ ಕಯ್ಯ ಮಂಚಿಗೆಯೆ'—ಮಂಚಿಗೆ ಎಂಬ ಪದವನ್ನು ಈತ ಎಷ್ಟು ಔಚಿತ್ಯಪೂರ್ಣವಾಗಿ ಬಳಸಿದ್ದಾನೆ. ಬೆಳೆದ ಹೊಲಗಳಲ್ಲಿ ಕಾಳುತಿನ್ನುವ ಹಕ್ಕಿಗಳನ್ನು ಓಡಿಸುವುದಕ್ಕಾಗಿ, ಪೈರನ್ನು ತುಂಟದನಗಳಿಂದ, ಕಳ್ಳಕಾಕರಿಂದ ರಕ್ಷಿಸುವುದಕ್ಕಾಗಿ ಮಂಚಿಕೆಗಳನ್ನು ಹಾಕಿಕೊಳ್ಳುವುದುಂಟು. ಒಕ್ಕಲು ಮಕ್ಕಳ ಬದುಕನ್ನು ಇಷ್ಟು ಚೆನ್ನಾಗಿ ಬಲ್ಲ ಕನ್ನಡ ಕವಿಗಳು ಅತಿ ವಿರಳ. ಆತ ಒಕ್ಕಲು ಮಕ್ಕಳಿಗೆ ಹೇಳುವ ವಚನಗಳಿವು.

ಕೋಟಿ-ವಿದ್ಯೆಗಳಲ್ಲಿ ಮೇಟಿ ವಿದ್ಯವೇಲೇಸು
ಮೇಟಿಯಿಂ ರಾಟೆ ನಡೆಗು
ಮೇಟಿಯಿಂ ರಾಟಿ ನಡೆಗುವಲ್ಲದೆ ದೇಶ
ದಾಟವೇ ಕೆಡಗು ಸರ್ವಜ್ಞ ॥

ಉತ್ತೊತ್ತಮ್ಮ ಹರಗದಲೆ, ಬಿತ್ತೊತ್ತಮ್ಮ ನೋಡದಲೆ
ಹೊತ್ತೇರಿ ಹೊಲಕೆ ಹೋದರೆ
ಹೊತ್ತೇರಿ ಹೊಲಕೆ ಹೋದರೆ—ಅವತನ್ನ
ನೆತ್ತರವ ಸುಡುವ ಸರ್ವಜ್ಞ ॥

ಹರಗದ ಎತ್ತಾಗಿ, ಬರಡಾದ ಹಯನಾಗಿ
ಹರಟೆ ಹೊಡೆಯುವ ಮಗನಾಗೆ
ಹರಟೆ ಹೊಡೆಯುವ ಮಗನಾಗೆ ಹೊಲದಲ್ಲಿ
ಕರಡವೇ ಬೆಳಗು ಸರ್ವಜ್ಞ ॥

ಮೇಟಿ ವಿದ್ಯೆ ಎಂದರೆ ಒಕ್ಕಲುತನ. ಅದಿಲ್ಲದಿದ್ದರೆ 'ರಾಟೆ', ಎಂದರೆ ನಾಡಿನ ರಥ ಸಾಗುವುದಿಲ್ಲ. ದೇಶದ ಜೀವವೇ ಹಾರಿಹೋಗುತ್ತದೆ. ಕಾಯಕನಿಷ್ಠೆ ಇಲ್ಲದ ಒಕ್ಕಲಿಗ ತನ್ನ ನೆತ್ತರವನ್ನು ತಾನೇ ಸುಟ್ಟುಕೊಂಡು ಹಾಳಾಗುತ್ತಾನೆ. ಅಂತವನ ಹೊಲದಲ್ಲಿ ಕಾಡು ಹುಲ್ಲು, ಕರಡ ಅಲ್ಲದೆ ಮತ್ತೇನು ಬೆಳೆದೀತು? ಹದಬೆದೆಯ ಕಾಲದಲ್ಲಿ ಆರಂಭವನ್ನು ಮರೆತವನು ಕದನದಲ್ಲಿ ಕೂರ್ ಅಂಬನ್ನು, ಚೂಪಾದ ಬಾಣವನ್ನು ಮರೆತಂತೆ: ನದಿ ದಾಟುವವನು ಹರಿಗೋಲನ್ನೇ ಮರೆತು ಹೋದಂತೆ.

ಈಗಿನ ಶಿವಮೊಗ್ಗ, ಕಾರವಾರ, ಧಾರವಾಡ ಜಿಲ್ಲೆಗಳನ್ನು ಒಳಗೊಂಡ ಕನ್ನಡ ಪ್ರದೇಶಕ್ಕೆ ಬೆಳುವಲನಾಡು ಎಂದು ಕರೆಯುತ್ತಿದ್ದರು. ಚಾಮರಸನ 'ಪ್ರಭುಲಿಂಗಲೀಲೆ'ಯಲ್ಲಿ ಈ ನಾಡಿನ ಸುರುಚಿರವರ್ಣನೆಯಿದೆ. ಮಹಾಕವಿ ಪಂಪನು "ಆರಂಕುಶಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ" ಎಂದು ಬಗೆದುಂಬಿ ಬಣ್ಣಿಸಿರುವುದು ಬೆಳುವಲನಾಡಿನ ಒಂದು ಭಾಗವಾದ 'ಬನವಸಿ ಪನ್ನಿರ್ಛಾಸಿರ'ವನ್ನೇ. ಅಲ್ಲಮ ಪ್ರಭುವಿನಂತಹ ಮಹಾವಿಭೂತಿಗಳಿಗೆ ಜನ್ಮವಿತ್ತ ಸೀಮೆಯಿದು. ಸತ್ಯಕ್ಕನ ಜಂಬೂರು, ಕನಕದಾಸನ ಬಾಡ, ಮಹಾದೇವಿ ಅಕ್ಕನ ಉಡುತಡಿ ಇರುವುದು ಈ ಪ್ರದೇಶದಲ್ಲಿಯೆ ಮಧ್ಯಕಾಲೀನ ಕರ್ನಾಟಕದ ವಿಶ್ವ ವಿದ್ಯಾಕೇಂದ್ರವೆನ್ನಿಸಿದ್ದ ಬಳ್ಳಿಗಾವೆಯು

ಬೆಳುವಲ ನಾಡಿಗೇ ಸೇರಿದುದು. ಸರ್ವಜ್ಞನಿಗೆ ಜನ್ಮ ವೀಯುವ ಸೌಭಾಗ್ಯವೂ ಈ ನಾಡಿಗೇ ಲಭಿಸಿರುವುದು. ಆ ನಾಡಿನ ಒಂದು ವೈಶಿಷ್ಟ್ಯವೆಂದರೆ ಮಲೆನಾಡು ಬಯಲುಸೀಮೆ ಎರಡರ ಸೆರಗೂ ಸೇರುತ್ತವೆ ಅಲ್ಲಿ. ಆದುದರಿಂದ ಅಲ್ಲಿ ಬಯಲುಸೀಮೆಯ ಬೆಡಗು ಮಲೆ ಸೀಮೆಯ ಸೊಬಗು ಎರಡನ್ನೂ ಕಾಣಬಹುದು. ಒಂದೊಂದು ಕಡೆ, ಎರಡರ ಸುಂದರ ಸಂಗಮವನ್ನೂ ಕಾಣ ಬಹುದು ಬೆಳುವೊಲ ಎಂದರೆ ಜೋಳ, ನವಣೆ, ಕಡಲೆ, ಹೆಸರು, ವ-ಡಕೆ, ಉದ್ದು ಬೆಳೆಯುವ ಫಲವತ್ತಾದ ಎರೆ ನೆಲವಿರುವ ಪ್ರದೇಶ ಎಂದೂ ಅರ್ಥಯಿಸಬಹುದು. ಆದುದರಿಂದಲೇ ಸರ್ವಜ್ಞ, ಅಲ್ಲಿಯ ಅಡಿಗೆಯ ರುಚಿ ಯ:ನ್ನುಂಡು,

ಜೋಳದ ಬೋನಕ್ಕೆ ಬೇಳೆಯು ತೊಗೆಯಾಗಿ
ಕಾಳೆಮ್ಮ ಕರೆದ ಹಯನಾಗಿ
ಕಾಳೆಮ್ಮ ಕರೆದ ಹಯನಾಗಿ ಬೆಳವಲದ
ಮೇಳ ನೋಡೆಂದ ಸರ್ವಜ್ಞ ॥

ಕಡಲೆಯನು ಗೋದಿಯನು ಮಡಿಕುದ್ದು ಬೆಳೆದರೂ
ಸುಡಬೇಕು ನಾಡನೆಂದವನ
ಸುಡಬೇಕು ನಾಡೆಂದವನ ಬಾಯೊಳಗೆ
ಪುಡಿಗಡುಬು ಬೀಳ್ಗು ಸರ್ವಜ್ಞ ॥

ಕಣಕದ ಕಡುಬಾಗಿ ಮಣಕೆಮ್ಮ ಹಯನಾಗಿ
ಕುಣಿಕುಣಿದು ಕಡೆವ ಸತಿಯಾಗಿ
ಕುಣಿಕುಣಿದು ಕಡೆವ ಸತಿಯಾಗಿ ಬೆಳುವಲದ
ಅಣಕ ನೋಡೆಂದ ಸರ್ವಜ್ಞ ॥

ಗೋದಿಯ ಕಡುಬಂತೆ, ಚೊಚ್ಚಿಲು ಎಮ್ಮೆಯ-ಬೆಣ್ಣೆ, ಆ ಬೆಣ್ಣೆಯನ್ನು ತೆಗೆಯುವವಳು ಕುಣಿಕುಣಿದು ಮೊಸರು ಕಡೆಯುವ ಕಡುಸೀರೆ, ಕಸುವು ಬನಿ ಬೆಡಗುಗಳ ಬೆಸುಗೆಯನ್ನು ಈ ವಚನದಲ್ಲಿ ಕಾಣಬಹುದು. ಬಯಲುಸೀಮೆಯ ಹೆಚ್ಚುಗಾರಿಕೆಯನ್ನು ಮೆಚ್ಚಿ ಬಣ್ಣಿಸಿರುವ ಸರ್ವಜ್ಞನು ಬೆಳುವಲನಾಡಿನ ಮತ್ತೊಂದು ಹೋಳಾಗಿರುವ ಮಲೆನಾಡಿನ ಪಯಿರು ಪಚ್ಚೆಗಳನ್ನು ತೋಟ ತುಡಿಗೆಗಳನ್ನು, ಚೆಲುವಿನ ನೆಲೆಗಳನ್ನು ಸುಖಸಂಸಾರದ ಚಿತ್ರವನ್ನು ಅಷ್ಟೇ ಹಿಗ್ಗಿನಿಂದ ಹಾಡಿರುತ್ತಾನೆ.

ಬೆಲ್ಲ ಗೆಣಸುಗಳುಂಟು ಅಲ್ಲಲ್ಲಿ ನೀರುಂಟು
ನೆಲ್ಲೋಗರುಂಟು ನೆಳಲುಂಟು
ನೆಲ್ಲೋಗರುಂಟು ನೆಳಲುಂಟು ಕೆರೆ ಕುಂಟೆ
ಎಲ್ಲೆಲ್ಲು ಉಂಟು ಸರ್ವಜ್ಞ ॥

ಅಲ್ಲವರಿಷಿಣವುಂಟು ಜೆಲ್ಲ ಬಿಳಿಯಲೆಯುಂಟು
ಮೆಲ್ಲಲ್ಕೆ ಒಳ್ಳೆ ಹಲಸುಂಟು
ಮೆಲ್ಲಲ್ಕೆ ಒಳ್ಳೆ ಹಲಸುಂಟು ಮಲೆನಾಡ
ನಲ್ಲೆನ್ನಬಹುದೆ ಸರ್ವಜ್ಞ ॥

ಕಿಚ್ಚುಂಟು ಕೆಸರುಂಟು ಬೆಚ್ಚನ ಮನೆಯುಂಟು
ಇಚ್ಚೆಗೆ ಬರುವ ಸತಿಯುಂಟು
ಇಚ್ಚೆಗೆ ಬರುವ ಸತಿಯುಂಟು ಮಲೆನಾಡ
ಮೆಚ್ಚ ನೋಡೆಂದ ಸರ್ವಜ್ಞ ॥

ಒಳ್ಳೆಯತನ ಕೆಟ್ಟತನಗಳು ಯಾವ ಒಂದು ಜಾತಿಯ ಗುತ್ತಿಗೆಯಲ್ಲ. ಸರ್ವಜ್ಞ ಹಲವು ಜಾತಿಗೆ ಸೇರಿದ ಜನರ ಒಳ್ಳೆಯತನವನ್ನೂ ಅವರಲ್ಲಿ ಕೆಲವರಲ್ಲಿರುವ ದೋಷಗಳನ್ನೂ ಬಹು ಚಮತ್ಕಾರದಿಂದ ಹಾಸ್ಯಮಯವಾಗಿ ವರ್ಣಿಸುತ್ತಾನೆ. ಅದಕ್ಕೆ ಮೊದಲು ಜಾತಿ ನಿರಸನವನ್ನು ಕುರಿತ ಹಾಡುಗಳು ತುಂಬ ಮನನೀಯವಾದವು. ಅದನ್ನು ಕೇಳಿ.

ಕುಲವಿಲ್ಲ ಯೋಗಿಗೆ ಛಲವಿಲ್ಲಜ್ಞಾನಿಗೆ
ತೊಲೆ ಕಂಬವಿಲ್ಲ ಗಗನಕ್ಕೆ
ತೊಲೆ ಕಂಬವಿಲ್ಲ ಗಗನಕ್ಕೆ ಸ್ವರ್ಗದಲಿ
ಹೊಲೆಗೇರಿಯಿಲ್ಲ ಸರ್ವಜ್ಞ ॥

ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು
ಸುಡುವಗ್ನಿ ಒಂದೆ ಇರುತಿರಲು
ಸುಡುವಗ್ನಿ ಒಂದೆ ಇರುತಿರಲು ಕುಲಗೋತ್ರ
ನಡುವೆ ಎತ್ತಣದು ಸರ್ವಜ್ಞ ॥

ಹೀಗೆಯೇ ಸಾಗುತ್ತದೆ ಜಾತಿನಿರಸನ ಪದ್ಧತಿ, ಇನ್ನು ವಿಪ್ರರ ಗುಣ ಅವಗುಣ ಸ್ವಭಾವಗಳು.

ವಿಪ್ರರಿಂದಲೆ ವಿದ್ಯೆ ವಿಪ್ರರಿಂದಲೆ ಬುದ್ಧಿ
ವಿಪ್ರ ನಿಜವಿಪ್ರರಿಲ್ಲದಿರೆ
ವಿಪ್ರ ನಿಜವಿಪ್ರರಿಲ್ಲದಿರೆ ಈ ಜಗವು
ಕ್ಷಿಪ್ರದಲಿ ಕೆಡುಗು ಸರ್ವಜ್ಞ ॥

ಕೆಟ್ಟರೆ ದ್ವಿಜರಿಂದ ಕೆಟ್ಟವರು ಇನ್ನಿಲ್ಲ
ಕೆಟ್ಟುದನು ಬಿಟ್ಟು ನಡೆದರೆ
ಕೆಟ್ಟುದನು ಬಿಟ್ಟು ನಡೆದರೆ ಅವರಿಂದ
ದಿಟ್ಟನವರಿಲ್ಲ ಸರ್ವಜ್ಞ ॥

ಕೊಟ್ಟವರ ತಲೆ ಬೆನ್ನ ತಟ್ಟುವರು ಹಾರುವರು
ಬಿಟ್ಟರೆ ಕುಟ್ಟಿ ಕೆಡಹುವರು
ಬಿಟ್ಟರೆ ಕುಟ್ಟಿ ಕೆಡಹುವರು ಹಾರುವರ
ಬಿಟ್ಟಬೇಡೆಂದ ಸರ್ವಜ್ಞ ॥

ಅಕ್ಕಸಾಲಿಗ, ಬಡಗಿ, ಬಣಜಿಗ, ಹರದ, ಪಂಚಾಳ, ಬಳೆಗಾರ, ಗಾಣಿಗ, ಕುಂಬಾರ, ಬೇಡ, ಜೇಡ, ಬೆಸ್ತರವ, ಕಟುಕ, ಡೊಂಬ, ಸುಂಕಿಗ, ಕುಂಟಣಗಿತ್ತಿ, ಕೊಂಡೆಯರ ಮೇಲೆ ಕಟ್ಟಿರುವ ಪದ್ಯಗಳ ಸಾಮಾನ್ಯವಾಗಿ ವಿಡಂಬನಾತ್ಮಕವಾಗಿವೆ. ಜೇಡ ಕುಂಬಾರ—ಇವರಿಬ್ಬರು ಮಾತ್ರ ಈ ನಿಯಮಕ್ಕೆ ಹೊರತು, ಸಾಧರ, ಎಂದರೆ ಒಕ್ಕಲಿಗ ಲಿಂಗಾಯುತರ ಮೇಲೆ ಅತಿಶಯವಾದ ಕೋಪ, ಬೆಳುವಲ ನಾಡಿನ ಜನತೆಯಲ್ಲಿ ಬಹುಪಾಲು ಅವರೇ. ಸದಾಕಾಲವೂ ಹೊಲದಲ್ಲಿ ಕಣದಲ್ಲಿ, ಅಡವಿಯಲ್ಲಿ ತನಗಾಗಿ ದುಡಿಯುತ್ತಿರುವ ಬಸವಣ್ಣನನ್ನು ಎಂದರೆ ಎತ್ತುಗಳನ್ನು ಚಮ್ಮಟಿಗೆಯಿಂದ ಬಿಗಿಯುತ್ತ ಅವುಗಳ 'ಬೆನ್ನ ಚಾರನ್ನೆತ್ತುವ' ಸಾದನೊಬ್ಬನನ್ನು ಕುರಿತು ಹೇಳಿದ ಇವನ ಮಾತೂ ಬಾರುಕೋಲಿನ ಬಿಗಿತದಂತೆಯೆ : "ಸಾದರಿಗೆ ಮಾದರಿಗೆ ಭೇದವೇನಿಲ್ಲಯ್ಯ, ಮಾದಿಗನು ತಿಂಬ ಸತ್ತುದನು ; ಸಾದ ತನಗಾದವರ ತಿಂಬ"

ಅಹಾರ ಅಭಯ ಮೈಥುನ—ಈ ಮೂರೂ ಮನುಷ್ಯನಲ್ಲಿ ಇತರ ಪ್ರಾಣಗಳಲ್ಲಿ ಇರುವ ಸಾಮಾನ್ಯ ಸಹಜ ಪ್ರವೃತ್ತಿಗಳು. ಅವುಗಳಲ್ಲಿ ಮೊದಲ ಸ್ಥಾನ ಅನ್ನಕ್ಕೆ. ಆದುದರಿಂದಲೇ

ಅನ್ನದೇವರ ಮುಂದೆ ಇನ್ನು ದೇವರು ಉಂಟೆ
ಅನ್ನವುಂಟಾದರುಣಲುಂಟು
ಅನ್ನವುಂಟಾದರುಣಲುಂಟು ಜಗಕೆಲ್ಲ
ಅನ್ನವೇ ಪ್ರಾಣ ಸರ್ವಜ್ಞ ॥

ಕಾಂಬ್ರಾಣ ಏರುವರೆ, ಕೊಂಬೆಯನು ಸೀಳುವರೆ
ರಂಬೆಯರ ತೋಳಲೊರಗುವರೆ
ರಂಬೆಯರ ತೋಳಲೊರಗುವರೆ ಒದಲಿಗಿ
ಷ್ಟಂಬಲಿಯು ಬೇಕು ಸರ್ವಜ್ಞ ॥

ಹಸಿಯದಿರೆ ಉಣಬೇಡ ಹಸಿದು ಮತ್ತಿರಬೇಡ
ಬಿಸಿಬೇಡ ತಂಗುಳುಣಬೇಡ
ಬಿಸಿಬೇಡ ತಂಗಳುಣಬೇಡ ವೈದ್ಯನ
ಗ್ಯಸಣೆ ಬೇಡೆಂಬ ಸರ್ವಜ್ಞ ॥

"ಅಕ್ಕಿಯನು ಉಂಬುವನು ಹಕ್ಕಿಯಂತಾಗುವನು", "ಜೋಳವನು ತಿಂಬುವನು ತೋಳದಂತಾಗುವನು", "ನವಣೆಯನು ತಿಂಬುವನು ಹವಣಾಗಿ ಇರುತಿಹನು", "ರಾಗಿಯನು ಉಂಬುವ ನಿರೋಗಿ ಎಂದೆನಿಸುವನು" ಇದು ಸರ್ವಜ್ಞನ ವೈದ್ಯ.

ಈಗ ಸಿಕ್ಕಿರುವ ಸುಮಾರು 2100 ಸರ್ವಜ್ಞ ವಚನಗಳಲ್ಲಿ 330 ಸ್ತ್ರೀವರ್ಣನೆಗೇ ಮೀಸಲಾಗಿವೆ. ಕಾಮಶಾಸ್ತ್ರವೇ ಕನ್ನಡದ ಕನ್ನಡಿಯಲ್ಲಿ ಪ್ರತಿಬಿಂಬಿತವಾಗಿದೆ. ಸ್ತ್ರೀಸ್ತುತಿ ಸ್ತ್ರೀನಿಂದೆ, ಜಾರಜಾರೆಯರ ಪದ್ಧತಿ, ವೇಶ್ಯಾಪದ್ಧತಿ ಎಂಬ ಭಾಗಗಳಿವೆ. ಸ್ತ್ರೀಸ್ತುತಿ ಸ್ತ್ರೀ ಮಹತ್ವಗಳನ್ನು ಕುರಿತ ಕೆಲವು ವಚನಗಳನ್ನು ಇಲ್ಲಿ ಉಲ್ಲೇಖಿಸಬಹುದು. ಉಳಿದುವನ್ನು ಒಬ್ಬೊಬ್ಬರೇ ಓದಿ ಮೆಲುಕು ಹಾಕುವುದು ಮೇಲು.

ಹೆಣ್ಣಿಂದಲೆ ಇಹವು ಹೆಣ್ಣಿಂದಲೆ ಪರವು
ಹೆಣ್ಣಿಂದಲೆ ಸಕಲ ಸಂಪದವು
ಹೆಣ್ಣಿಂದಲೆ ಸಕಲ ಸಂಪದವು. ಹೆಣ್ಣೊಲ್ಲ
ದಣ್ಣಗಳು ಯಾರು ಸರ್ವಜ್ಞ ॥

ಮಗಳಕ್ಕ ತಂಗಿಯು ಮಿಗೆಸೊಸೆಯು ನಾದಿನಿಯು
ಜಗದ ವನಿತೆಯರು ಜನನಿಯು
ಜಗದ ವನಿತೆಯರು ಜನನಿಯು ಇವರೊಳಗೆ
ಜಗಕೊಬ್ಬಳೈಸೆ ಸರ್ವಜ್ಞ ॥

ಬಿಲ್ಲು ಬಲ್ಲಿತು, ನಾರಿ ಬಿಲ್ಲಿಂದ ಕಡುಸಣ್ಣ
ಬಿಲ್ಲನೆ ಮುರಳಿ ಎರಗಿಸಿತು,
ಬಿಲ್ಲನೆ ಮುರಳಿ ಎರಗಿಸಿತು ನಾರಿಯಿಂ
ಬಲ್ಲಿದರು ಯಾರು ಸರ್ವಜ್ಞ ॥

"ನಾರಿ" ಎಂಬುದಕ್ಕೆ ಬಿಲ್ಲಿನಹೆದೆ ಎಂದು ಅರ್ಥ. ಕವಿ ಇಲ್ಲಿ ಗಂಡನ್ನು ಬಿಲ್ಲಿಗೂ ನಾರಿಯನ್ನು ಹೆಣ್ಣಿಗೂ ಹೋಲಿಸಿರುವುದು ತುಂಬ ಅರ್ಥವತ್ತಾಗಿದೆ, ಔಚಿತ್ಯಪೂರ್ಣವಾಗಿದೆ. ಇನ್ನು ಸುಗುಣ ಸಂಪನ್ನೆಯಾದ ಗರತಿಯ ವರ್ಣನೆ.

ಉರಿಯದಲೆ ಮುರಿಯದಲೆ ಶಿರವೆತ್ತಿನೋಡದಲೆ
ಸರಿಬಂದ ಸ್ಥಾನದಿರುವವಳು
ಸರಿಬಂದ ಸ್ಥಾನದಿರುವವಳು ದೊರಕುವುದು
ಗುರುಕರುಣವೆಂದ ಸರ್ವಜ್ಞ.

ಪರಪುರುಷನನು ತನ್ನ ಪರಮಪಿತನೆಂದರಿತು
ಸ್ಥಿರಚಿತ್ತವುಳ್ಳ ಸುದತಿಯನು
ಸ್ಥಿರಚಿತ್ತವುಳ್ಳ ಸುದತಿಯನು ಸನ್ನೆಯಲಿ
ಕರೆಯುವವರಾರು ಸರ್ವಜ್ಞ.

ಸರ್ವಜ್ಞನ ವಚನಗಳಲಿ ರಸವಾದ ಪದ್ಧತಿ ಎಂಬುದು ಒಂದು ಭಾಗ. ರಸವಾದ ಎಂದರೆ ತಾಮ್ರ ಅಥವಾ ಅಂತಹ ಲೋಹವನ್ನು ಬಂಗಾರವನ್ನಾಗಿ ಪರಿ

ವರ್ತಿಸುವ ರಸವಿದ್ಯೆ. ಸರ್ವಜ್ಞ ಬಂಗಾರ ಮಾಡುವ ಕೆಲವು ವಿಧಾನಗಳನ್ನು ಹೇಳಿ, ಅನಂತರ ತನ್ನ ತೀರ್ಮಾನ ಕೊಟ್ಟಿದ್ದಾನೆ.

ಓದಿವಾದಿಗಳೆಲ್ಲ ಕಾದು ವಾದವ ಮಾಡಿ
ಊದಲು ಬೂದಿ ಒಳಸೇರಿ
ಊದಲು ಬೂದಿ ಒಳಸೇರಿ ಬಾಯಾರಿ
ಹೋದುದನು ಕಂಡೆ ಸರ್ವಜ್ಞ ॥

'ರಾಜ" ಎಂಬ ಮಾತು ಎಂದು ಹುಟ್ಟಿತೋ ಅಂದೇ ರಾಜನೀತಿ ರಾಜಕೀಯ ಹುಟ್ಟಿದ್ದು. ಅವು ಜನಜೀವನದ ಪ್ರಧಾನ ಅಂಗಗಳೂ ಹೌದು. ಆದುದರಿಂದ ಜನತೆಯ ಕವಿಯಾದ ಸರ್ವಜ್ಞನ ಕೋಶದಲ್ಲಿ ಈ ಸಂಬಂಧದ ನೂರಾರು ಆಣಿ ಮುತ್ತುಗಳಿವೆ. ಆದರೆ ಇಲ್ಲಿರುವುದು ಶಾಸ್ತ್ರವಲ್ಲ, ಅನುಭವವಾಣಿ. ರಾಜನ ವರ್ತನೆ ಹೇಗಿರಬೇಕು, ಹೇಗಿರಬಾರದು, ಮಂತ್ರಿಯಲ್ಲಿರಬೇಕಾದ ಗುಣ ಸ್ವಭಾವ ಯೋಗ್ಯತೆಗಳೇನು, ರಾಜ ಪರಿವಾರ ಅಥವಾ ಸಿಬ್ಬಂದಿಯ ನಡೆನುಡಿಗಳು ಎಂತಿರಬೇಕು, ಮುಂತಾದ ವಿಚಾರಗಳು ಈ ಭಾಗದಲ್ಲಿವೆ. ''ತಂತ್ರಿವಾದ್ಯವು ಲೇಸು" ಎಂದೂ 'ಅಡಿಯ ಮುಂದಿಡೆ ಸ್ವರ್ಗ ಅಡಿಯ ಹಿಂದಿಡೆ ನರಕ, ಅಡಿಗಶ್ವಮೇಧ ಫಲ; ಸ್ವಾಮಿಕಾರ್ಯಕ್ಕೆ ಮಡಿಯಲೇ ಬೇಕು, ಎಂದು ಸ್ವಾತಂತ್ರ ಹೋರಾಟಗಾರರನ್ನು ಹುರಿದುಂಬಿಸಿದ್ದು ಸರ್ವಜ್ಞನೆ. ''ನಾಡೆಂಬ ದೇಹಕ್ಕೆ ರೂಢಿಪತಿಯೇ ಪ್ರಾಣ, ನಾಡಳಿಯೆ ರೂಢಿಪತಿ ಕೆಡಗು, ರೂಢಿಪತಿಯಳಿಯೆ ನಾಡೆಲ್ಲ ಕೆಡಗು '' - ಎಂದಿದ್ದಾನೆ ಆತನೆ. ಆದರೆ ಇದು ದೊರೆಗಳ ಕಾಲವಲ್ಲ ಪ್ರಜೆಗಳ ಕಾಲ. ಜನತೆಯೇ ಪ್ರಭು ಈಗ. ಪ್ರಜೆಗಳ ಪ್ರತಿನಿಧಿಗಳು ರಾಜ್ಯವಾಳುತ್ತಿರುವರು. ಸರ್ವಜ್ಞನು ಹೇಳಿದ ಬುದ್ಧಿವಾದ ಈಗ ಪ್ರಜಾ ಪ್ರತಿನಿಧಿಗಳಿಗೆ, ನಾಯಕರಿಗೆ ಅನ್ವಯವಾಗಬೇಕು. ಅಂತಹವುಗಳಲ್ಲಿ ಕೆಲವು ಇವು. ವ್ಯಾಖ್ಯಾನವೇ ಬೇಕಿಲ್ಲ;

ಮೆಚ್ಚಿಪಂಕರಾಜನಲಿ ಎಚ್ಚರಿಂದಿರಬೇಕು
ಎಚ್ಚರವ ತಪ್ಪಿನಡೆದಿಹರೆ
ಎಚ್ಚರವ ತಪ್ಪಿನಡೆದಿಹರೆ ಆ ಮೆಚ್ಚು
ಕಿಚ್ಚಿನಂತಕ್ಕು ಸರ್ವಜ್ಞ ॥

ಅರಸುಕೊಲುವರೆ ಮಂತ್ರಿ ಕರಿಸಿ ಕಪ್ಪವಕೊಡಲು
ಬೆರಸಿ ತಳವಾರ ಬೀಳಲ್ಕೆ
ಬೆರಸಿ ತಳವಾರ ಬೀಳಲ್ಕೆ ಪರಿಪರಿಸ
ರಾರಿನ್ನು ಜಗದಿ ಸರ್ವಜ್ಞ ॥

ಅರಸ ರಕ್ಕಸನಂತೆ ಪರಮಂತ್ರಿ ಹುಲಿಯಂತೆ
ಬರೆವಾತ ನಾಡನರಿಯಂತೆ
ಬರೆವಾತ ನಾಡನರಿಯಂತೆ ಪರಿವಾರ
ಗರಗಸದಂತೆ ಸರ್ವಜ್ಞ ॥

ಒಳ್ಳೆಯ ದೊರೆಗಳು ದೇವರಿಗೆ ಸಮಾನ, 'ರಾಜಾಪ್ರತ್ಯಕ್ಷ ದೇವತಾ' ಅವರು ಒಕ್ಕಲನ್ನು, ಅಂದರೆ ಪ್ರಜೆಗಳನ್ನು ನಲುಗಿಸದೆ ಯಾವಾಗಲೂ ಅವರನ್ನು ತಮ್ಮ ಮಕ್ಕಳಂತೆ ಕಾಣುವವರು ಕರ ಭಾರ ಹೇರುವುದಿಲ್ಲ.

ದೊರೆತನವ ಮಾಡುವರು ಕರೆದನ್ನ ನೀಡುವರು
ಉರಗಭೂಷಣನ ನೆನೆವವರು
ಉರಗಭೂಷಣನ ನನೆವವರು ಧರೆಯೊಳಗೆ
ನರರಲ್ಲ ನೋಡು ಸರ್ವಜ್ಞ ॥

ಒಕ್ಕಲನು ನಲುಗಿಸದೆ ಲೆಕ್ಕವನು ಸೆಕ್ಕಿಸದೆ
ಕಕ್ಕುಲತೆಯಿಂದ ನಡೆಯಿಸುವ
ಕಕ್ಕುಲತೆಯಿಂದ ನಡೆಯಿಸುವ ಅರಸು ತಾ
ಚಕ್ಕಂದ ವಿರುವ ಸರ್ವಜ್ಞ ॥

ದೈವ ಪದ್ಧತಿ, ಲೇಸು ಪದ್ಧತಿ, ಹೊಲ್ಲ ಪದ್ಧತಿ, ದಾನ ಪದ್ಧತಿ, ನೀತಿ ಪದ್ಧತಿ, ಕಾಲಜ್ಞಾನ ಪದ್ಧತಿ, ಬೆಡಗು, ಎಲ್ಲೆಲ್ಲಿಯೂ ನಮಗೆ ದೊರೆಯುವುದು ಸರ್ವಜ್ಞನ ಅನುಭವದ ಅಮೃತದ ಹನಿ. ಯಾವುದನ್ನು ಹೇಳೋಣ ಯಾವುದನ್ನು ಬಿಡೋಣ, ಕನ್ನಡನಾಡಿನ ಸತ್ಪುತ್ರನಾಗುವವನ ನಡೆನುಡಿ, ಮಾತು, ಉಡಿಗೆ ತೊಡಿಗೆ ಹೇಗಿರಬೇಕೆಂಬುದನ್ನು ತುಂಬು ವಾತ್ಸಲ್ಯದಿಂದ ಬೋಧಿಸುತ್ತಾನೆ ಈ ನಾಡಗುರು. ಒಮ್ಮೊಮ್ಮೆ ಬಯ್ದಿರಬಹುದು, ಅಂದಿರಬಹುದು, ಕಟಕಿ ಆಡಿರಬಹುದು, ವ್ಯಂಗ್ಯೋಕ್ತಿಯನ್ನಾಡಿರಬಹುದು, ಹಾಸ್ಯ ಪರಿಹಾಸ್ಯ ಮಾಡಿರಬಹುದು ಆ ನುಡಿಗಳ ಅಡಿಯಲ್ಲಿ ಕನ್ನಡಿಗನ ಬಾಳು ಬಂಗಾರವಾಗಬೇಕೆಂಬ ಅತ್ಯುತ್ಕಟ ಹಾರೈಕೆ ಬಯಕೆ ಇದೆ. ಆತನಿಗೆ ವಸುಧೆಯೇ ಒಂದು ಕುಟುಂಬ.

ಊರೆಲ್ಲ ನಂಟರು ಕೇರಿಯೆಲ್ಲವು ಬಳಗ
ಧಾರಿಣಿಯು ಎಲ್ಲ ಕುಲದೈವ
ಧಾರಿಣಿಯು ಎಲ್ಲ ಕುಲದೈವವಾಗಿನ್ನು
ಯಾರನ್ನು ಬಿಡಲೋ ಸರ್ವಜ್ಞ ॥

ಇಂತಹ ಮಾನವತಾವಾದಿ ವಿಶ್ವಪ್ರೇಮ ನಮ್ಮ ನಾಡಿನ ಪುಣ್ಯ. ಈತನ ಒಂದೊಂದು ಪದ್ಯವೂ ಕನ್ನಡ

ನಾಡಿನ ಜನಜೀವನವನ್ನು ಪ್ರತಿಬಿಂಬಿಸುವ ರತ್ನದರ್ಪಣ. ಆದುದರಿಂದ ಈತನನ್ನು ಕನ್ನಡ ನಾಡಿನ ಮೊಟ್ಟಮೊದಲನೆಯ ರಾಷ್ಟ್ರಕವಿ ಎನ್ನಬಹುದು. ಸಾವಿರ ವರ್ಷಗಳ ಹಿಂದೆಯೇ ಶಾಸನಗಳಲ್ಲಿ ಬಳಕೆಯಾಗುತ್ತಿದ್ದ ತ್ರಿಪದೀ ಛಂದಸ್ಸು ಕಾರಣಾಂತರಗಳಿಂದ ಕವಿಗಳ ಮತ್ತು ಪಂಡಿತರ ಅನಾದರಕ್ಕೆ ಪಾತ್ರವಾಗಿತ್ತು. ಜನಪದ ಸಾಹಿತ್ಯದಲ್ಲಿ ಗಣ್ಯ ಸ್ಥಾನವನ್ನೇನೋ ಪಡೆದಿತ್ತು. ಸರ್ವಜ್ಞ ಹುಟ್ಟಿ ಕನ್ನಡದ ಕನ್ನಡಿಯಂತಿರುವ ಈ ಛಂದಸ್ಸಿಗೆ ಜೀವಕಳೆಯಿತ್ತು ಬೆಳಸಿ ಬೆಳೆಯಿಸಿದ್ದಾನೆ. ಈತನ ವಿಚಾರಗಳು ಕೂಡ ಕ್ರಾಂತಿಕಾರಕವಾದುವು. ಹಿಂದುಮುಂದಿಂದುಗಳ ಅರಿವಿದ್ದ ಈತನಿಗೆ ಕ್ರಾಂತಿಕವಿ, ದ್ರಷ್ಟಾರ, ರಾಷ್ಟ್ರಕವಿ ಎಂದು ಗೌರವಿಸುತ್ತಿರುವುದು ಸೂಕ್ತವೂ ಸಮಯೋಚಿತವೂ ಆಗಿರುತ್ತದೆ.

●

---

( 6 ನೇ ಪುಟದಿಂದ )

ಲೆಕ್ಕ ಮುಗಿಸಿ ಹೊಸದನ್ನು ಆರಂಭಿಸುವರು. ಹೊಸ ಲೆಕ್ಕದ ಪುಸ್ತಕಗಳ ಮೇಲೆ ಬೆಳ್ಳಿಯ ನಾಣ್ಯ ಇಟ್ಟು ಪೂಜಿಸುವರು. ಸುಗಂಧ ದ್ರವ್ಯ, ಹೂ, ಅರಿಷಣ ಕುಂಕುಮ ಏರಿಸುವರು. ಅನಂತರ ಭವ್ಯ ಮೇದವಾನಿ.

### ನವ ಸಂವತ್ಸರ

ನಾಲ್ಕನೆಯ ದಿನ ಕಾರ್ತಿಕ ಶುದ್ಧದ ಮೊದಲ ದಿನ. ಅದೇ ಸಂವತ್ಸರದ ಆದಿ ಈ ಸಂವತ್ ಶಕವು ವಿದ್ವನ್ಮಣಿ ಉದಾರಿ ದೊರೆ ವಿಕ್ರಮಾದಿತ್ಯನದು–ಇದಕ್ಕೆ ಬಲಿ ಪ್ರತಿಪದ ಎಂದೂ ಹೆಸರು. ಬಲಿಚಕ್ರವರ್ತಿಯು ಶಿವನ ನಿಸ್ಸೀಮ ಭಕ್ತನೆಂದು ಹೆಸರಾಗಿದ್ದನು. ಅವನ ತಪಸ್ಸಿಗೆ ಮೆಚ್ಚಿ ಶಿವನು ಅವನಿಗೆ ಅನೇಕ ವರಗಳನ್ನು ದಯಪಾಲಿಸಿದನು. ಔದಾರ್ಯದ ವಿಷಯದಲ್ಲಿ ಅವನು ದೇವತೆಗಳಿಗೂ ಮಿಗಿಲೆನಿಸಿದನು! ಅವರು ಇವನನ್ನು ಕಂಡು ಅಸೂಯೆ ತಳೆದಿದ್ದರೆಂದರೂ ತಪ್ಪಿಲ್ಲ.

ಅಂತೆ ಶ್ರೀ ವಿಷ್ಣುವು ಅವನನ್ನು ಶಿಕ್ಷಿಸಲು ನಿರ್ಧರಿಸಿದನು. ಅವನು ಅದಕ್ಕಾಗಿ ವಾಮನಾವತಾರ ತಾಳಿ ತನ್ನ ಮೂರು ಪಾದದಳತೆಯ ಭೂಮಿಯನ್ನು ದಾನವಾಗಿ ಬೇಡಿದನು. ಹೇಳಿ ಕೇಳಿ ಅವನು ಔದಾರ್ಯ ದಾಹಕ ಒಪ್ಪಿಬಿಟ್ಟನು.

ಒಮ್ಮಿಂದೊಮ್ಮೆಲೆ ವಿಷ್ಣುವು ವಿಶ್ವರೂಪ ತಾಳಿ ಒಂದು ಹೆಜ್ಜೆಯಿಂದ ಭೂಮಿಯನ್ನೆಲ್ಲ ವ್ಯಾಪಿಸಿ ಇನ್ನೊಂದರಿಂದ ಆಕಾಶವನ್ನು ಆವರಿಸಿಬಿಟ್ಟನು. ಮೂರನೆಯ ಹೆಜ್ಜೆಗೆ ಅವಕಾಶ ಎಲ್ಲಿ ಎನ್ನಲು ಬಲಿ ತನ್ನ ತಲೆಯನ್ನೇ ಒಡ್ಡಿದನು. ವಿಷ್ಣು ಅದರ ಮೇಲೆ ಪಾದವಿರಿಸಿ ಪಾತಾಳ ಲೋಕಕ್ಕೆ ಒತ್ತಿಬಿಟ್ಟನು.

ಈ ಮೊದಲು ಅವನು ಚಕ್ರವರ್ತಿಗೆ ಪಾತಾಳ ಲೋಕದ ದೊರೆತನವನ್ನು ದಯಪಾಲಿಸಿದನು. ದೀವಳಿಗೆ ದಿನದಂದು ವರ್ಷಕ್ಕೊಮ್ಮೆ ಅವನ ಆಳಿಕೆ! ಅರಸು ಬಲಿಯ ಸಂಸ್ಮರಣೆಯ ದಿನವದು.

ದೀಪಾವಳಿಯ ಐದನೆಯ ದಿನ ಯಮದ್ವಿತೀಯ ಇಲ್ಲವೆ ಭಾವುಬೀಜ. ಒಂದು ಲೋಕಪ್ರಿಯ ಕಲ್ಪನೆ, ಎಂದರೆ ಯಮನು ಅಂದು ತನ್ನ ಸೋದರಿಯ ಮನೆಗೆ ಬಂದನಂತೆ ಅವನಿಗೆ ಅಪ್ರತಿಮ ಆತಿಥ್ಯ ದೊರೆಯಿತು. ಇದೇ ಸರಣಿಯಲ್ಲಿ ಸೋದರರು ತಮ್ಮ ಸೋದರಿಯರಲ್ಲಿ ಆತಿಥ್ಯ ಪಡೆವ ಪರಂಪರೆಗೆ ಮೊದಲಾಯಿತು.

ಸೋದರಿ ತನ್ನ ಸೋದರನನ್ನು ಮಣೆಯ ಮೇಲೆ ಕೂಡ್ರಿಸಿ ಸುತ್ತಲು ಅಂದವಾದ ರಂಗೋಲಿಯ ನಕ್ಷೆ ತೆಗೆಯುವಳು. ಆರತಿಯನ್ನು ಬೆಳಗಿ ಅವನಿಗೆ ಕುಂಕುಮ ಇಡುವಳು. ಅನಂತರ ಅವನಿಗೆ ಸಿಹಿ ತಿನಿಸು ನೀಡಿ ದೀರ್ಘಾಯು ಕೋರುವಳು. ಇದಕ್ಕೆ ಪ್ರತಿಯಾಗಿ ಸೋದರನು ಉಚಿತ ಕಾಣಿಕೆ ಸಲ್ಲಿಸಿ ಸದಿಚ್ಛೆ ಅಭಿವ್ಯಕ್ತಗೊಳಿಸುವನು. ಹೀಗೆ ಈರ್ವರ ನಡುವೆ ಪ್ರೀತಿ ಬೆಳೆಯುವದು. ಎಂಥ ಸತ್ಪರಂಪರೆ! ಪರಸ್ಪರ ಸಹಾನುಭೂತಿಯ ಅಪರಾವತಾರ.

ದೀಪಾವಳಿಯ ಹಬ್ಬದ ಒಂದು ಪ್ರಮುಖ ಭಾಗ ಎಂದರೆ ಪಗಡೆಯಾಟ. ಈ ಪ್ರಸಂಗದಲ್ಲಿ ಶಿವಪಾರ್ವತಿಯರ ಆಟ ನೆನಪಾಗುವುದು. ಜೂಜಿದಲ್ಲಿ ಶಿವನು ಪಾರ್ವತಿಗೆ ತನ್ನ ಸಿರಿಯನ್ನೆಲ್ಲ ಸೋತನಂತೆ–ನಾಗೇಂದ್ರ, ನಂದಿ ಕೃತ್ತಿ, ಇಂದು ಮುಂತಾದುವು. ಈ ಸಂಗತಿಯು ಮಗ ಕಾರ್ತಿಕೇಯನಿಗೆ ತಿಳಿಯಲು ಅವನೂ ಜೂಜಾಟದಲ್ಲಿ ಪ್ರಾವಿಣ್ಯತೆ ಪಡೆದು ತಾಯಿ ಪಾರ್ವತಿಯೊಡನೆ ಆಡಿ ಕಳೆದ ಸೊತ್ತನ್ನೆಲ್ಲ ತಂದೆಗೆ ಮರಳಿಸಿದನಂತೆ! ಏನು ಮೋಜು! ಆಕೆಗೆ ಬಹಳ ನಿರಾಸೆ ಎನಿಸಿತು. ಆಕೆಯ ಮಗ ಗಜಾನನ ಈ ಸಹಾಯಕ್ಕೆ ನಿಂತ ಸೋದರ ಕಾರ್ತಿಕೇಯನನ್ನು ಸೋಲಿಸಿದ.

( 28 ನೇ ಪುಟ ನೋಡಿ )

ಕಾ ವ್ಯ ವಾ ಹಿ ನಿ



# ನಗುವೆಯೇಕೆ ರುದ್ರರೂಪ ?

—ಎಂ. ಜಿ. ವೆಂಕಟೇಶಯ್ಯ

ದೀಪವೆತ್ತಿ ನಮಿಪ ಮುನ್ನ
ಕಂಡೆ ನಿನ್ನ ನಗೆಯ ಮುಖವ
ತೇಜರೂಪ ತಂತ್ರ ರೂಪ
ನಗುವೆಯೇಕೆ - ರುದ್ರ ರೂಪ ? ॥೧॥

ತಳದಳೀಗ ಧರ್ಮಕಂಡೆ
ನುಡಿಯಲೀಗ ಕರ್ಮಕಂಡೆ
ಮಾತಿನಲ್ಲಿ ಮುಕ್ತಿಕಂಡೆ
ನಗುವೆಯೇಕೆ - ರುದ್ರ ರೂಪ ? ॥೨॥

ಬದುಕು ಹಳೆಯ ಬಟ್ಟೆಯುಟ್ಟೆ
ಬಿದುರ ಮುರುಕ ಕಳಶವಿಟ್ಟೆ
ತಿರುಕನಾಗಿ ಮಣಿವೆನೆಂದು
ನಗುವೆಯೇಕೆ - ರುದ್ರ ರೂಪ ? ॥೩॥

ನಿನ್ನ ತೆಗಳಿ ತಮುವ ಹೊಗಳಿ
ಹೊಂಚು ಹಾಕಿ ಯುಕ್ತಿಯಿಂದ
ಹೊನ್ನ ಕಳಶ ನಿಲ್ಲ ಇಲ್ಲಿ
ನಗುವೆಯೇಕೆ ರುದ್ರ ರೂಪ ? ॥೪॥

ಬಣ್ಣ ಸೇರಿ ನಿನ್ನ ಬಿಟ್ಟು
ಹೆಣ್ಣ ಮೋಸ ಮಾಡಿ ಹೊನ್ನ
ತಿನ್ನಲಿಲ್ಲ ನಾನು ಎಂದೆ
ನಗುವೆಯೇಕೆ ರುದ್ರರೂಪ? ॥೫॥

ಕಳ್ಳ ಜನರ ಕಾಲು ಹಿಡಿದು
ಸುಳ್ಳು ಹಣವ ಕೈಯಲಿಟ್ಟು
ಡೊಳ್ಳ ಮಾನ ಗಳಿಸಲಿಲ್ಲ.
. ನಗುವೆಯೇಕೆ ರುದ್ರರೂಪ? ॥೬॥

ಮುಚ್ಚು ಮಂತ್ರ ಹೊಗಳು ತಂತ್ರ
ಮಾಡಿ ಹೂಡಿ ರೂಢಿಯಿಲ್ಲ.
ದಾತರೆಲ್ಲ ಸತ್ತರೆಂದು
ನಗುವೆ ಯೇಕೆ ರುದ್ರರೂಪ? ॥೭॥

ಜಾತಿ ಕುಲದ ಭೇದ ಮಿಥ್ಯ
ಜಾತಿ ಸರ್ವವೆಲ್ಲ ವೊಂದೆ
ಜಾತರಲ್ಲಿ ನಿನ್ನ ಕಂಡೆ
ನಗುವೆಯೇಕೆ-ರುದ್ರರೂಪ ? ॥೮॥

ನಿನ್ನ ಶರಣರನ್ನ ನಾನು
ನಿನ್ನ ಕಂಡೆನೆಂದೆ ಕಂಡೆ
ನಿನ್ನ ದಾಸ ದಿವ್ಯ ತೇಜ
ನಗುವೆಯೇಕೆ-ರುದ್ರರೂಪ ? ॥೯॥

ನನ್ನ ನೋಡಿ ನಗುವೆಯಲ್ಲ !
ನಿನಗೆ ಅಳುವು ಹುಟ್ಟಲಿಲ್ಲ !
ಅಷ್ಟೆ ಸಾಕು ನನ್ನ ಪುಣ್ಯ !
ನಗುವೆಯೇಕೆ-ರುದ್ರರೂಪ ? ॥೧೦॥

ನಿನ್ನ ಆಸ್ತಿ ನಾನು ದೇವ
ನನ್ನ ಆಸ್ತಿ ನೀನು ದೇವ
ನನ್ನ ನೀನೆ ತೆಗಳುವಂತೆ
ನಗುವೆಯೇಕೆ ರುದ್ರರೂಪ ? ॥೧೧॥

ನನ್ನ ನೋವು ನಿನ್ನ ಆಟ
ನನ್ನ ಉಸಿರು ನಿನ್ನ ಓಟ
ನನ್ನ ಮಾತು ನಿನ್ನ ಮಾಟ
ನಗುವೆಯೇಕೆ ರುದ್ರರೂಪ ? ॥೧೨॥

ಪೆಣ್ಣ ಗಂಡ ಪೊಗಳಿನಭಕೆ
ತೆಗಳಿ ಅವರ ಕ್ಷಣಕೆ ರವಕೆ
ಬೇಗ ಕೀರ್ತಿ ಗಳಿಸಲಿಲ್ಲ
ನಗುವೆಯೇಕೆ ರುದ್ರರೂಪ ? ॥೧೩॥

ಆಜನ ತಲೆಯ ತರಿದು ನಕ್ಕೆ
ಶ್ರೀಯನುಂಗಿ ನಲಿದು ನಕ್ಕೆ
ನನ್ನ ಕಾಯ ಸೆಳೆದು ಸುಡಲು
ನಗುವೆಯೇನು ರುದ್ರರೂಪ ? ॥೧೪॥

ನಾದ ಬಿಂದು ಕಳಾರೂಪ
ರಾಗ ತಾಳ ಲಯದರೂಪ
ಗಂಡು ಹೆಣ್ಣು ಯೋಗರೂಪ
ನಗುವಿಯೇಕೆ ರುದ್ರರೂಪ ? ॥೧೫॥

ನಿನ್ನ ಗುಟ್ಟು ನೀನೆ ಬಲ್ಲೆ
ಅದನ ನಾನು ಕೇಳಲೊಲ್ಲೆ
ಮೂಢ ಮತಿಯ ನೋಡಿ ನೀನು
ನಗುವೆಯೇಕೆ ರುದ್ರರೂಪ ? ॥೧೬॥

( 26 ನೇ ಪುಟದಿಂದ )

ಈ ಸಂಗತಿಯು ಶಿವನಿಗೆ ತಿಳಿಯಲು ಅವನು ಎಲ್ಲರಲ್ಲಿ ಒಪ್ಪಂದ ಮಾಡಿಸಿದನು. ಇನ್ನೊಂದು ಪೌರಾಣಿಕ ಸನ್ನಿವೇಶ ಎಂದರೆ, ಕೌರವ ಪಾಂಡವರ ಲೆತ್ತದಾಟ ( Dice ). ಏನೇ ಇರಲಿ, ಈ ನಿಮಿತ್ತದಿಂದ ದೀಪಾವಳಿಯಲ್ಲಿ ಪಗಡೆ ಆಟಕ್ಕೆ ಅಪೂರ್ವ ಪ್ರಾಶಸ್ತ್ಯಯುಂಟಾಗಿದೆಯಷ್ಟೆ. ಅದೊಂದು ರಸಮಯ ಸನ್ನಿವೇಶ.

### ಪ್ರಾದೇಶಿಕ-ಪ್ರಚಲಿತ ಕತೆಗಳು.

ನಮ್ಮ ದೇಶದಾದ್ಯಂತವು ದೀ ಪಾ ವ ಳಿ ಯ ಉತ್ಸವ ವಿಧವಿಧ ರೀತಿಯಲ್ಲಿ ನಡೆಯುವುದು.

ಉತ್ತರ ಭಾರತದ ಶೀಖರ ಕಲ್ಪನೆ ಈ ವಿಷಯದಲ್ಲಿ ವಿಭಿನ್ನವಾಗಿದೆ. ನೂರು ವರ್ಷದ ಹಿಂದೆ ಇದೇ ದೀಪಾವಳಿಯ ದಿನದಂದು ಅವರ ಪೂಜ್ಯ ದರ್ಬಾರ ಸಾಹೇಬ ಗುರುದ್ವಾರದ ಅಡಿಗಲ್ಲು ಇಡಲಾಯಿತಂತೆ, ಪಂಜಾಬಿನ ಸ್ವರ್ಣ ಮಂದಿರದಲ್ಲಿ ಅಂದು ವಿಜೃಂಭಣೆಯ ದೀಪೋತ್ಸವ. ಅಂದೇ ಶೀಖ ಗುರು ಹರಗೋವಿಂದನು ವಿಮೋಚನೆ ಹೊಂದಿ ತನ್ನ ಐವತ್ತೆರಡು ಅನುಯಾಯಿಯಿಗಳೊಂದಿಗೆ ಮೊಗಲರ ಸೆರೆಯಿಂದ ಪಾರಾಗಿ ಗ್ವಾಲ್ಹೇರ ಕ್ರೋಟೆಯಿಂದ ಬಂದನು.

ಉತ್ತರ ಭಾರತದಲ್ಲಿ ದೀಪಾವಳಿಯು ರಾಮನು ಲಂಕೆಯದೊರೆ ರಾವಣನನ್ನು ಸಂಹರಿಸಿದ ಸಂಕೇತ ಎನಿಸಿದೆ, ಅದು ವಿಜಯದ ಉತ್ಸಾಹದ ಸನ್ನಿವೇಶ.

ದಸರಾದಂದು ದುರ್ಗಾದೇವಿಯ ಪೂಜೆ ನಡೆಯುವುದು. ಬಳಿಯಲ್ಲಿ ಶ್ರೀರಾಮನ ಪ್ರತಿಮಾರ್ಚನೆ. ಅಂದೇ ಇರುಳು ಕಾಳಿ ಹಾಗೂ ಲಕ್ಷ್ಮಿಯರ ಪೂಜೆ ಚಿತ್ರಮಯವಾಗಿ ಸಾಂಗವಾಗುವದು. ಶಕ್ತಿಯ ಆರಾಧನೆಯ ಪ್ರತಿರೂಪವದು ! ಕೆಲವು ಭಕ್ತರು ಆಕೆಗೆ ಜಗನ್ಮಾತೆ ಎಂದು ಸಂಬೋಧಿಸುವರು. ಎಲ್ಲ ಔಚಿತ್ಯ ಪ್ರಜ್ಞೆಯ ಪ್ರತೀಕ.

ಬಂಗಾಲಿ ತರುಣಿಯರು ದೀಪಾವಳಿಯಲ್ಲಿ ನದಿಯಲ್ಲಿ ದೀಪ ತೇಲಿ ಬಿಡುವರು. ಆ ಸಾಲು ಸರಾಗವಾಗಿ ಸಾಗಿ ಮುಳಿದರೆ ನಾಡಿಗೆ ಅಭ್ಯುದಯ ಎಂಬ ತಿಳುವಳಿಕೆ ಪ್ರರೂಢವಾಗಿರವದು. ಮರುವರ್ಷ ಸುಖಮಯವಾಗಲಿ ಬಾಳು ಲೀಲಾಮಯವಾಗಲಿ ಎಂಬ ಹಾರೈಕೆ ಎಲ್ಲರದು !

ರಜಪೂತರಿಗೆ ದೀಪಾವಳಿ ಮಂಗಳ ಮಹೋತ್ಸವ, ಅವರು ದೀಪೋತ್ಸವ ಜರುಗಿಸುವರಲ್ಲದೆ ಜರತಾರಿ ಉಡಿಗೆ ತೊಡುವರು. ಶ್ರೀರಾಮನು ಅಯೋಧ್ಯೆಗೆ ಮರಳಿ ಅರಸನಾಗಿ ಪಟ್ಟಾಭಿಷಿಕ್ತನಾದ ಸನ್ನಿವೇಶದಲ್ಲಿ ಅವರ ಸಂಗೀತ ನೃತ್ಯಗಳು ಮನಮೋಹಕವಾಗಿರುವವು. ಎಂತಹ ಧಾರ್ಮಿಕ ಶ್ರದ್ಧೆ !

ಜೈನ ಜನಾಂಗಕ್ಕೂ ದೀಪಾವಳಿ ಅತ್ಯಂತ ಪವಿತ್ರ, ಅಂದೇ ಮಹಾವೀರನು ನಿರ್ವಾಣ ಐದಿದನಂತೆ. ಕ್ರಿ. ಶ. ಪೂರ್ವ ೪೭೭ ನೆಯ ವರ್ಷವದು !

ಮಹಾರಾಷ್ಟ್ರದಲ್ಲಿ ಮಹಿಳೆಯರು ಆಗ ಅನ್ನದಿಂದ ಬಲಿಚಕ್ರವರ್ತಿಯ ಮೂರ್ತಿಯನ್ನು ನಿರ್ಮಿಸುವರು. ಬಲಿಚಕ್ರವರ್ತಿಗೆ ಪಟ್ಟ ದೊರೆತು ಎಲ್ಲ ಅನ್ಯಾಯಗಳು ಅಳಿಸಿ ಹೋಗಲಿ ಎಂದು ಹಾರೈಸುವುದುಂಟು !

ದಕ್ಷಿಣ ಭಾರತದಲ್ಲಿ ನರಕಾಸುರನನ್ನು ಶ್ರೀಕೃಷ್ಣನು ಸಂಹರಿಸಿದ ಉತ್ಸವ ನಡೆಯುವದು, ಅಸಕ್ತಿನ ಮೇಲೆ ಸಕ್ತಿನ ವಿಜಯವದು !

ಇಂತು ಅನ್ಯಾಯದ ಪ್ರತಿಭಟನೆ ದೀಪಾವಳಿಯ ಸಂಕೇತ. ದೇಶದಾದ್ಯಂತ ಐಕ್ಯತೆಯ ಹೆಗ್ಗುರುತು ಅದು ! ನಾಳಿನ ಸುಖದ ಹಾರೈಕೆಯ ಸಾಂಸ್ಕೃತಿಕ ಹಬ್ಬ ದೀಪಾವಳಿ. ಇದೀಗ ಅದರ ಪೌರಾಣಿಕ ಮಹಿಮೆ, ಘನ ಮಹಿಮೆ !

(ವಿವಿಧ ಮೂಲಗಳಿಂದ)

---

## ಓದುಗಬಳಗಕ್ಕೊಂದು ಸವಿ ಸಂದೇಶ

**ನಿಮ್ಮ ಕೈ ಸೇರಲಿದೆ ! 'ಸಿದ್ಧಗಂಗಾ' ಹೇಗೆ ? ಹೊಸ ಆಕಾರ ( 1/8 ಡೆಮ್ಮಿ ) ಆಕರ್ಷಕ ವಿಷಯ, ಸುಂದರ ಮುಖ ಪುಟಗಳೊಡನೆ. ಯಾವಾಗ ? ಜನವರಿ 1981 ರಿಂದ.**

# ಶ್ರೀ ರೇಣುಕ ರೋಲರ್ ಫ್ಲೋರ್ ಮಿಲ್ಲು

**ಬಿ. ಹೆಚ್. ರೋಡು, : : ತುಮಕೂರು.**



ವಿದೇಶಿ ಅತ್ಯಾಧುನಿಕ ಯಂತ್ರೋಪಕರಣಗಳಿಂದ ತಯಾರಿಸಲ್ಪಟ್ಟ ನಮ್ಮ R. R. ಬ್ರಾಂಡ್
ರವೆ, ಮೈದಾ, ಬೂಸಾಗಳನ್ನೇ ಉಪಯೋಗಿಸಿರಿ.

ಮೇನೇಜಿಂಗ್ ಪಾರ್ಟನರ್
**ಸಿ. ವೀರಭದ್ರಯ್ಯ**

---

*With Best Compliments From :*

KST. 1170169 9
CST, 1175169 1

Tele: Grams "SHANK"
Phone No 8414

# Malabar Krishna Beedi Works

## Mandipet, Tumkur-572101.

POST BOX NO-27

---

★ ಶ್ರೀ ನಂಜುಂಡೇಶ್ವರ ಬೇಕರಿ ★ ಫೋನ್ ನಂ. **8077**

ಚಿಕ್ಕಪೇಟೆ ★ ★ ತುಮಕೂರು

ಅತ್ಯುತ್ತಮ ರುಚಿಕರ ಹಾಗೂ ಆರೋಗ್ಯಕರವಾದ ☞ ಮಿಲ್ಕ್, ಫ್ರೂಟ್, ಖಾರಬ್ರೆಡ್, ಬನ್‌ಗಳು ಮತ್ತು
ಕೇಕ್, ಪಪ್ಸ್, ಓಂ ರಸ್ಕ್ ಬಿಸ್ಕತ್‌ಗಳ
ತಯಾರಕರು

**ನಮ್ಮ ಹೊಸ ಶಾಖೆ :**
ಬಸ್‌ನಿಲ್ದಾಣದಸಮೀಪ
ಶ್ರೀ ನಂಜುಂಡೇಶ್ವರ ಬೇಕರಿ ಮತ್ತು ಕಾಂಡಿಮೆಂಟ್ಸ್
ಪ್ರಶಾಂತ್ ಟಾಕೀಸ್ ಎದುರು, ಅಶೋಕ ರೋಡ್
[ವರ್ಕ್ಸ್ ಬಿಲ್ಡಿಂಗ್] ತುಮಕೂರು 572101.

**ವಿಶೇಷ ತಯಾರಿಕೆಯಾದ**
ರಾಗಿ ಬಿಸ್ಕತ್ ಮತ್ತು ಮಿಲ್ಕ್ ಬ್ರೆಡ್‌ನ್ನೇ
ಉಪಯೋಗಿಸಿರಿ.

LICENCED TO POST WITHOUT PRE PAYMENT LICENCE NO. 3
Registred with the Registrar of News papers for India under No. 17139/69
Siddaganga Monthly Magazine Siddaganga. Mutt. Reg No. KRN Q-9

ವಿಜಯಾ ಬ್ಯಾಂಕಿನಲ್ಲಿ ಉಳಿತಾಯ ಎಷ್ಟೇ ಇರಲಿ ಕಡಿಮೆಯಲ್ಲ.

ಮುಖ್ಯವಾಗಿ ಉಳಿತಾಯವೇ ವಿನಃ, ಎಷ್ಟು ಎಂಬುದಲ್ಲ.



ವಿಜಯಾ ಬ್ಯಾಂಕ್ 9 ಉಳಿತಾಯ ವಿಧಾನಗಳಿಂದ
ನಿಮಗೆ ಸಹಾಯವಾಗುವುದು, ದಿನಂ ಪ್ರತಿ ಕಡಿಮೆ
ಎಂದರೆ 25 ಪೈಸೆಯಿಂದ ಪ್ರಾರಂಭಿಸಿ ಎಷ್ಟು
ಸಾಧ್ಯತೆ ಇದೆಯೋ ಅಷ್ಟು.



ಎಷ್ಟೇ ಕಡಿಮೆ ಉಳಿತಾಯವಾಗಿರಲಿ
ತುಂಬಿದ ಮೊತ್ತವಾಗಿ ಬೆಳೆಯುವುದನ್ನು
ಕಂಡು ಆಶ್ಚರ್ಯ ಪಡುತ್ತೀರಿ ಕ್ರಮವಾಗಿ ಇಷ್ಟಿಷ್ಟೇ ಆದರೆ.



# ವಿಜಯಾ ಬ್ಯಾಂಕ್

( ಭಾರತ ಸರ್ಕಾರದ ಒಡೆತನಕ್ಕೆ ಸಂಪೂರ್ಣವಾಗಿ ಸೇರಿದೆ )

ಪ್ರಧಾನ ಕಛೇರಿ

2. ರೆಸಿಡೆನ್ಸಿ ರೋಡ್, ಬೆಂಗಳೂರು-560025

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.